# ಘಾತುಕ ಶಿತಿಕಂಠ.

(ಸಾಮಾಜಿಕ ಕಾದಂಬರಿ.)



ಲೇಖಕ ಹಾಗು ಪ್ರಕಾಶಕ

ಭಿ. ಪ. ಕಾಳೆ,

ಆನಂದವನ.



೨ನೇ ಆವೃತ್ತಿ.

೧೯೩೦

ಬೆಲೆ ೧೦ ಆಣೆ.

# ನಿವೇದನ.

ಇದೊಂದು ಆಗಿಹೋದ ಸಂಗತಿಯ ಕಥೆ. ಇದರಲ್ಲಿಯ ಸಂಗತಿಗಳೆಲ್ಲವೂ ನಿಜವೇ; ಆದರೆ ಆ ವ್ಯಕ್ತಿಗಳ ಹೆಸರಿನಿಂದಲೇ ಇದನ್ನು ಬರೆಯುವದು ಸರಿಯಲ್ಲವೆಂದು ಎಷ್ಟೋ ಜನ ನನ್ನ ಸ್ನೇಹಿತರು ನನಗೆ ಆಗ್ರಹಪೂರ್ವಕವಾಗಿ ಹೇಳಿದ್ದರಿಂದ ನಾನು ಆ ನಡೆದ ಸಂಗತಿಯನ್ನೇ ಬೇರೆ ಹೆಸರು-ದೆಸೆಗಳಿಂದ ಬರೆದು ಪ್ರಕಟಿಸಿರುತ್ತೇನೆ.

ಕಥೆಯು ಒಳ್ಳೇ ಬೋಧಪ್ರದವೂ, ಯಥಾರ್ಥಸಂಗತಿಗಳಿಂದ ಯುಕ್ತವೂ ಆಗಿರುವದರಿಂದ ಇದರ ಮೊದಲನೇ ಆವೃತ್ತಿಯ ಪ್ರತಿಗಳು ಬಹು ಬೇಗನೆ ತೀರಿಹೋದವು. ಆದರೂ ಈ ಎರಡನೇ ಆವೃತ್ತಿಯನ್ನು ತೀವ್ರ ಹೊರಡಿಸುವದಾಗಿರಲಿಲ್ಲ. ಹೊಸ ಹೊಸ ವಾಚಕರ ಸಂತತ ಬೇಡಿಕೆಗಾಗಿ ಇದನ್ನು ಈಗ ಮತ್ತೆ ಮುದ್ರಿಸಿ ಪ್ರಕಟಿಸಿರುತ್ತದೆ. ನಮ್ಮ ಪ್ರಿಯ ಕನ್ನಡ ಬಂಧುಗಳು ಎಂದಿನಂತೆ ಇದಕ್ಕೂ ಆಶ್ರಯವನ್ನೀಯಬೇಕೆಂದು ಇಚ್ಛಿಸುತ್ತೇನೆ.

ಆನಂದವನ,

ತಾ|| ೧-೧೧-೧೯೩೦.

ಲೇಖಕ.

# ಘಾತುಕ ಶಿತಿಕಂಠ.

## ೧ನೇ ಮೆಟ್ಟಿಲು.



ವಾಚಕ ಮಹಾಶಯರೇ, ನಮ್ಮ ಶಿತಿಕಂಠನು ಘಾತುಕನೆಂದು ಪ್ರಸಿದ್ಧವಾದದ್ದು ಮಹಾಯುದ್ಧವು ಮುಗಿದನಂತರ; ಅಂದರೆ ಇ. ಸ. ೧೯೧೯-೧೯೨೦ ರಲ್ಲಿ. ಮಹಾಯುದ್ಧವು ಪೌರ್ವಾತ್ಯ-ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಜರ್ಜರಗೊಳಿಸಿ ಆಗ ತಾನೆ ಪರಿಸಮಾಪ್ತಿಯನ್ನು ಹೊಂದಿರಬಹುದು. ಹಳ್ಳಿಪಳ್ಳಿಗಳಲ್ಲಿಯೂ ನಗರ-ಪಟ್ಟಣಗಳಲ್ಲಿಯೂ ಮಹಾಯುದ್ಧಕ್ಕಾಗಿ ಕೂಡಿಸುತ್ತಿದ್ದ 'ರಿಕ್ರೂಟ್ಸ ರಿಕ್ರೂಟ್ಸ'ವೆಂಬ ಕರ್ಕಶ ಧ್ವನಿಯು ಇದೀಗ ಅಡಗಿರಬಹುದು. ನಮ್ಮ ಹಿಂದುಸ್ತಾನದ ಜನರು ನಾನಾ ಕಷ್ಟ-ನಷ್ಟಗಳನ್ನು ಸಹಿಸಿ, ಮಹಾಯುದ್ಧಕ್ಕಾಗಿ ತೆತ್ತ ಫಂಡು, ಕಾಣಿಕೆ, ರಿಕ್ರೂಟ್ಸಗಳ ಆಹುತಿಯಿಂದ ಆ ರಣದೇವತೆಯು ಶಾಂತಳಾದ್ದರಿಂದ ನಮ್ಮಲ್ಲಿಯ ಕುಂದಿಹೋಗಿದ್ದ ವ್ಯಾಪಾರೋದ್ಯೋಗಗಳು ಆಗತಾನೆ ತಲೆಯೆತ್ತತೊಡಗಿದ್ದವು. ಗಾಡಿಯ (ಜಬ್ಬಲಪುರದ) ಹಳದೀ ಜೋಳಗಳೂ, ರಂಗೂನ ಕಡೆಯ ಹಿಟ್ಟಕ್ಕಿಗಳೂ ಪೇಟೆಗೆ ಬಾರದಾಗಿ ನಾಲ್ಕಾರು ವಾರಗಳೇ ಆಗಿರಬಹುದು. ಆ ಹೊಲಸು ಧಾನ್ಯಗಳಿಂದ ಮಾಡಲ್ಪಟ್ಟ ಕದನ್ನವನ್ನು ತಿಂದು ತಿಂದು ಮೈ-ಕೈಗಳಲ್ಲಿ ಉಂಟಾಗಿದ್ದ ನೋವೂ, ಅಶಕ್ತತೆಯೂ, ಇದೀಗ ಕುಸ ಕಡಿಮೆಯಾಗಹತ್ತಿರಬಹುದು. ಎರಡು-ಮೂರು ವರ್ಷಗಳಿಂದ ನಮ್ಮೂರ ಕಡೆಗೆ ಚೆನ್ನಾಗಿ ಮಳೆಯಾಗಿರಲಿಲ್ಲ. ಆದೇ ಈ ಸಲ ಕಾಲಕಾಲಕ್ಕೆ ಹದವಾಗಿ ಮಳೆಯಾದ್ದರಿಂದ ಹೊಲದೊಳಗಿನ ಬೆಳೆಗಳು ನೋಡುವವರ ದೃಷ್ಟಿಯನ್ನು ಆಕರ್ಷಿಸುವಂಥವಾಗಿದ್ದವು. ಮಳೆ-ಬೆಳೆಗಳ ಸಮೃದ್ಧಿಯಾದಬಳಿಕ ದನ-ಕರುಗಳ, ಆಳು-ಹೋಳುಗಳ, ಶೆಟ್ಟಿ-ಸಾವುಕಾರರ ಆನಂದಕ್ಕೆ ಕೊರತೆಯೇ? ಹುಟ್ಟಿದ ಹನ್ನೆರಡನೇ ದಿನಕ್ಕೂ, ಸತ್ತ ಹನ್ನೆರಡನೇ ದಿನಕ್ಕೂ ಏಕೋಪ್ರಕಾರವಾಗಿ ಹೋಳಿಗೆ ತುಪ್ಪದಿಂದ ಕೈ ತೊಳಕೊಳ್ಳುವ ಹಾರುವರ ಚೆಲ್ಲಾಟವಂತೂ ಆಗ ಹೇಳಲಾಸಲ್ಲ! ಕಳೆದ ವರ್ಷದ ಇನ್‌ಫ್ಲುಯಂಝಾ ಬೇನೆಯಲ್ಲಿ ಹೆಚ್ಚಾಗಿ ಸತ್ತ ಜನರ ವರ್ಷಾಂತಿಕಗಳು ಸಮೀಪಿಸಿದ್ದರಿಂದಂತೂ ವೈದಿಕ ಬ್ರಾಹ್ಮಣರ ಕೋಲಾಹಲಕ್ಕೆ ಅಳತೆಯೇ ಇರಲಿಲ್ಲ!!

ಇಂಥೀ ಪ್ರಸಂಗದಲ್ಲಿ ಮೂಡಣಗಡಿಯ ಹಾರುವರ ಒಬ್ಬ ಚಲುವ ಹುಡುಗನು ನಮ್ಮೂರಿಗೆ ಬಂದನು. ಅವನ ವಯಸ್ಸು ೨೦ರ ಒಳ-ಹೊರಗಿರ

ಬಹುದು. ಆತನ ಮೈಬಣ್ಣವು ಶುದ್ಧ ಬಂಗಾರದಂತಿತ್ತು. ಮುಖಮಂಡಲವು ಅಷ್ಟು ತೇಜಸ್ವಿಯಾಗಿರದಿದ್ದರೂ ಮೋಹಕವಾಗಿದ್ದಿತು. ಜಟ್ಟಿಗಳಂತೆ ಅವನ ಮೈ-ಕೈಗಳು ಹುರಿಕಟ್ಟಿನವಾಗಿ ತೋರದಿದ್ದರೂ ಅಶಕ್ತ ಇಲ್ಲವೆ ಕಂಗೆಟ್ಟವರಂತೆ ಅವನ ಅವಯವಗಳಿರಲಿಲ್ಲ; ಅವು ಅವನ ದೇಹಯಷ್ಟಿಗೆ ಸರಿಯಾದ ಪ್ರಮಾಣದಲ್ಲಿದ್ದವು. ಆತನು ಮೈಸೂರ ಕನ್ನಡವನ್ನು ಚನ್ನಾಗಿ ಮಾತಾಡುತ್ತಿದ್ದನು; ಆದರೆ ಅವನ ಮಾತೃಭಾಷೆಯು ಅದಲ್ಲವೆಂಬದು ಚಾಣಾಕ್ಷರಾದವರಿಗೆ ಬಹು ಶ್ರಮದಿಂದ ತಿಳಿದು ಬರುತ್ತಿತ್ತಲ್ಲದೆ, ಸಾಮಾನ್ಯರಿಗೆ ಅವನ ಮಾತಿನ ಮೆಟ್ಟು ತಿಳಿಯುತ್ತಿರಲಿಲ್ಲ. ಅವನು ಬಂದವನೇ ನಮ್ಮೂರ..............ರಲ್ಲಿ ಇಳಕೊಂಡನು. ನಮ್ಮೂರು ದೊಡ್ಡದಲ್ಲ; ಸಾಮಾನ್ಯವಾದ ಗ್ರಾಮವು. ಆದರೂ ಇಲ್ಲಿ ವೈದಿಕರು, ಲೌಕಿಕರು, ಪಾರಮಾರ್ಥಿಕರು, ಭಟ್ಟಂಭಟ್ಟರು, ಸೆಟ್ಟಿ-ಸಾವುಕಾರ, ಅಂಗಡಿಕಾರ, ನೇಕಾರ, ಬಣಗಾರ, ಬಡಿಗೇರ, ಕಮ್ಮಾರ ಮುಂತಾದ ಹದಿನೆಂಟು ಕಸಬಿನವರು ಇದ್ದು ಒಳ್ಳೇ ಬಗರಿನಿಂದ ಬಾಳುವೆ ಮಾಡುತ್ತಿದ್ದರು. ನಮ್ಮಲ್ಲಿ ಎಲ್ಲ ಪ್ರಕಾರದ ಹಾಗು ಎಲ್ಲ ತರಗತಿಯ ಜನರಿದ್ದದರಿಂದ ತಕ್ಕಮಟ್ಟಿಗೆ ವಿದ್ಯಾವ್ಯಾಸಂಗಕ್ಕೂ ಅನುಕೂಲವಿತ್ತು. ಈಗಿನಂತಹ ಪ್ರಾಜ್ಞಪಾಠಶಾಲೆ, ಹಾಯಸ್ಕೂಲು, ಕಾಲೇಜುಗಳು ನಮ್ಮಲ್ಲಿರದಿದ್ದರೂ ವೈದಿಕವಿದ್ಯೆಯನ್ನು ಹೇಳಿಕೊಡುವ ವ್ಯವಸ್ಥೆಯು ಬಹುಶಃ ಪ್ರತಿಯೊಬ್ಬ ವೈದಿಕನ ಮನೆಯಲ್ಲೂ ಇದ್ದಿತು. ಊರಲ್ಲಿ ಕನ್ನಡ ಮರಾಠೀ ಉರ್ದುಶಾಲೆಗಳೂ, ೩-೪ ಇಯತ್ತೆಯ ವರೆಗಿನ ಖಾಸಗೀ ಇಂಗ್ಲಿಷಶಾಲೆಯೂ ಇದ್ದಿತಲ್ಲದೆ, ವ್ಯಾಪಾರ-ಉದ್ದಿಮೆಗಳನ್ನೂ ಬಡಿಗ-ಕಮ್ಮಾರಿಗರ ಕಸಬುಗಳನ್ನೂ ಕಲಿಯುಲಿಕ್ಕೆ ಬಹು ದೂರದ ಹುಡುಗರು ನಮ್ಮಲ್ಲಿಗೆ ಬಂದಿರುತ್ತಿದ್ದರು. ಬ್ರಾಹ್ಮಣರಲ್ಲಿ ಒಬ್ಬಿಬ್ಬ ಗೃಹಸ್ಥರು ಸಧನರೂ ಸುಶೀಲರೂ ಆಗಿದ್ದರಲ್ಲದೆ, ಅವರು ಒಳ್ಳೇ ವಿದ್ಯಾವ್ಯಾಸಂಗಿಗಳಾದುದರಿಂದ ವೈದಿಕ ಮತ್ತು ಲೌಕಿಕವಿದ್ಯೆಗಳನ್ನೋದುವ ಪರಸ್ಥಳದ ಬಡಹುಡುಗರಿಗೆ ಊಟ-ಉಡಿಗೆಗಳ ಅನುಕೂಲತೆಯನ್ನು ಮಾಡಿಕೊಡುತ್ತಿದ್ದರು. ಅಂತೇ ಅವರಲ್ಲಿ ಹಲಕೆಲವು ವಿದ್ಯಾರ್ಥಿಗಳು ಸ್ವೇಚ್ಛೆಯಿಂದ ಉಂಡುಟ್ಟು ಇದ್ದು, ಕೆಲವರು ನಮ್ಮೂರ ವೈದಿಕರಲ್ಲಿ ಯಾಜ್ಞಿಕ-ಕಾವ್ಯಗಳನ್ನು ಓದುತ್ತಿದ್ದರು; ಕೆಲವರು ಇಂಗ್ಲಿಷ ಶಾಲೆಗೆ ಹೋಗುತ್ತಿದ್ದರು; ಬೇರೆ ಹಲವರು ಕನ್ನಡ ತರಗತಿಗಳಲ್ಲಿ ಓದುತ್ತಿದ್ದರು. ಬ್ರಾಹ್ಮಣರಂತೆ ನಮ್ಮೂರ ಬ್ರಾಹ್ಮಣೇತರರಲ್ಲಿಯೂ, ಧರ್ಮಾತ್ಮರಿಗೂ ವಿದ್ಯಾವ್ಯಾಸಂಗಿಗಳಿಗೂ ಕೊರತೆಯಿರಲಿಲ್ಲವಾದ್ದರಿಂದ, ಅವರಲ್ಲಾದರೂ ಹಲಕೆಲವು ಪರಸ್ಥಳದ ಬಡಪೋರರು ಬಂದಿದ್ದು, ನಮ್ಮೂರ ಶಾಲೆಗಳ ಗೌರವವೃದ್ಧಿಗೆ ಕಾರಣರಾಗುತ್ತಿದ್ದರು. ಇರಲಿ.

ಮೇಲೆ ಹೇಳಿದ ಆ ಮುಂಡಣಗಡಿಯು ಪೋಕನು + + + + ರ ಮನೆಗೆ ಬಂದ ನಾಲ್ಕುದಿನಗಳಲ್ಲಿಯೇ ಅವನೊಳ್ಳೇ ಮಾತಿನ ಮಲ್ಲನೆಂದು ಅವನ ಸರಿಜೋಡಿಯ ಹುಡುಗರು ಆಡಿಕೊಳ್ಳಲಾರಂಭಿಸಿದರು. ಅವನ ಬುದ್ಧಿ-ಚಾತುರ್ಯ-ಆಡಂಬರಗಳಿಗೆ ನಮ್ಮೂರ ವೃದ್ಧರು ಸಹ ತಲೆದೂಗಹತ್ತಿದರು! "ತಾನು ಮುಂಬೈಯಲ್ಲಿ ವಿಲ್ಸನ್‌ಕಾಲೇಜಿನಲ್ಲಿ ಇಂಟರಕ್ಲಾಸಿನಲ್ಲಿ ಓದುತ್ತಿದ್ದೆನೆಂ"ದು ಅವನು ಕೆಲವು ಸದ್ಗೃಹಸ್ಥರಿಗೆ ಹೇಳಿದರೆ, ಕಲ್ಕತ್ತೆಯೊಳಗಿನ ಯಾವುದೋ ಒಂದು ಯುನಿವ್ಹರ್ಸಿಟಿಯ ಬಿ ಎ ಪರೀಕ್ಷೆಗೆ ಕಟ್ಟಿರುವೆನೆಂದು ಮತ್ತೆ ಕೆಲವರಿಗೆ ಹೇಳುತ್ತಿದ್ದನು; ಆದರೆ ಅವನು ಒಳ್ಳೇ ಚತುರನಾದುದರಿಂದ, ತನ್ನ ಗುಟ್ಟು ಹೆರವರಿಗೆ ತಿಳಿಯದ ಹಾಗೆ ನಡೆಯುತ್ತಿದ್ದನು. "ಇಷ್ಟು ಓದಿದ ನೀನು ನಮ್ಮೂರಲ್ಲಿ ಏನು ಕಲಿಯಬೇಕಾಗಿದೆ?" ಎಂದು ಯಾರಾದರೂ ಅವನಿಗೆ ಪ್ರಶ್ನೆ ಮಾಡಿದರೆ, ನಾನು ಈ ಊರ..........ರ ಬಳಿಗೆ ಕೆಲ ದಿನ ಸಂಸ್ಕೃತ ಹೇಳಿಸಿಕೊಳ್ಳಬೇಕೆಂದಿದ್ದೇನೆ. ಅವರು ಸಂಸ್ಕೃತದಲ್ಲಿ ಒಳ್ಳೇ ಗಟ್ಟಿಗರೆಂದು ನಾನು ಮುಂಬೈಯಲ್ಲೇ ಕೇಳಿದ್ದೆನು. ಹೇಗೂ ಈ ಟರ್ಮಿನಲ್ಲಿ ನನ್ನ ಇತರ ಅಭ್ಯಾಸವೆಲ್ಲ ಚನ್ನಾಗಿ ಆಗಿ ಹೋಗಿದೆ. ಸಂಸ್ಕೃತವನ್ನಷ್ಟು ನೋಡಿಕೊಂಡರೆ ತೀರಿತೆಂದು ಒಬ್ಬರೆದುರಿಗೆ ಕೊಚ್ಚಿದರೆ, ಇನ್ನೊಬ್ಬರೆದುರಿಗೆ ನನ್ನ ಇತರ ವಿಷಯಗಳೆಲ್ಲವೂ ನೆಟ್ಟಗಾಗಿವೆ; ಆದರೆ ಇಂಗ್ಲಿಷ ಭಾಷಾವಿಷಯವು ತುಸ ಮಂದವಾಗಿರುವದರಿಂದ ಈ ಊರ..........ರ ಬಳಿಯಲ್ಲಿ ಹೇಳಿಸಿಕೊಳ್ಳುವ ಸಲುವಾಗಿ ಬಂದಿರುತ್ತೇನೆಂದು ಸಾರುತ್ತಿದ್ದನು.

ಅವನು ನಮ್ಮೂರ + + + + ರ ಮನೆಯಲ್ಲಿ ಇಳಿದುಕೊಂಡಿದ್ದನೆಂದು ಮೊದಲೇ ಹೇಳಿದೆಯಷ್ಟೆ? ಅವರ ಮನೆಯ ಜನರು ಸದ್ವ್ಯಾಸಂಗಿಗಳೂ, ಸುಶೀಲರೂ ಆಗಿದ್ದರು. ವಾಚಕರೇ, ಪ್ರತಿಯೊಂದು ವ್ಯಕ್ತಿಯ ಸ್ವಭಾವದ ಬಗ್ಗೆ ಕಂಡಷ್ಟರ ಮಟ್ಟಿಗಾದರೂ ಚಲೋ-ಕೆಡಕೆಂದು ತಮ್ಮ ತಿಳುವಳಿಕೆಯ ಪ್ರಕಾರ ಹೇಳಿ ಆ ವ್ಯಕ್ತಿಯ ಗುಣಪರಿಚಯವನ್ನು ಮಾಡಿಕೊಡಬಹುದು; ಆದರೆ ಯಾವನೊಬ್ಬನ ಶೀಲದ ಪರಿಚಯವನ್ನು ಒಬ್ಬನು ಮತ್ತೊಬ್ಬನಿಗೆ ಮಾಡಿಕೊಡುವದಕ್ಕೆ ಸಾಧ್ಯವಿದೆಯೆ? ಮೊದಲನೇ ಬಾಜೀರಾಯನು ಮಹಾ ಪರಾಕ್ರಮಿಯೂ, ಕಷ್ಟಾಳುವೂ, ದಿನಾಲು ತಪ್ಪದೆ ಸಾವಿರ ಸೂರ್ಯನಮಸ್ಕಾರಗಳನ್ನು ಹಾಕುತ್ತ ದೇವ-ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ ಆಗಿದ್ದನು. ಆತನು ಸ್ವಾಮಿಕಾರ್ಯಕ್ಕಾಗಿ ಎಷ್ಟೋ ಕಷ್ಟ-ನಷ್ಟಗಳನ್ನು ಸಹಿಸಿ, ಮರಾಟರ ರಾಜ್ಯವಿಸ್ತಾರ ಮಾಡಿದನು; ಆದರೆ ಇಂಥ ಶ್ರೇಷ್ಠ ಮತ್ತು ಪೂಜ್ಯ ವ್ಯಕ್ತಿಯು 'ಮಸ್ತಾನಿ' ಎಂಬ ಯವನ ಯುವತಿಯ ಪ್ರೇಮಕಟಾಕ್ಷಕ್ಕೆ ಬಲಿಯಾಗಿ

ಅಷ್ಟರವುಟ್ಟಿಗಾದರೂ ಶೀಲಭ್ರಷ್ಟವಾಗಿದ್ದಿಲ್ಲವೇ? ಇಂಥ ಎಷ್ಟೋ ಉದಾಹರಣೆಗಳು ನಮ್ಮ ಪ್ರಾಚೀನ ಹಾಗು ಅರ್ವಾಚೀನ ಇತಿಹಾಸದಲ್ಲಿ ಕಾಣಬಹುದು. ಅಷ್ಟು ದೂರವೇಕೆ? ಈಗಲೂ ಮನೆಮನೆಗೂ ಇದರ ಅನುಭವವನ್ನು ಹೊಂದಬಹುದು. ಇದರಂತೆಯೇ ನಮ್ಮೂರ............ರ ಮನೆಯ ಸ್ಥಿತಿಯೂ ಇದ್ದಿತು.

ಶಿತಿಕಂಠನು ಬಂದನಂತರ ಕೆಲ ದಿನ ಅದನ್ನು-ಇದನ್ನು ಎಂದು ಓದುವ ನೆವ ಮಾಡಿದನು. ಅವನು ಸ್ವಭಾವತಃ ವಿದ್ಯೆಯಲ್ಲಿ ಮಂದನು; ಆದರೆ ತೋರಿಕೆಯಲ್ಲಿ ಮಾತ್ರ ಮಹಾವಿದ್ವಾಂಸನಂತೆ ನಟಿಸುತ್ತಿದ್ದನು. ಕೆಲ ದಿನಗಳಲ್ಲಿಯೇ ಅವನು ವ್ಯಾಸಂಗವನ್ನು ನಿಲ್ಲಿಸಿ, ತಾನಿರುತ್ತಿದ್ದ ಮನೆಯ ಹುಡುಗಿಯರಿಗೆ ಓದು ಕಲಿಸಲಾರಂಭಿಸಿದನು. ಅವನಿದ್ದ ಮನೆಯ ಹೆಂಗಸರು ನಮ್ಮೂರ ಎಲ್ಲ ಹೆಂಗಸರಿಗಿಂತ ವಿದ್ಯಾವಂತರು. ಹಾಡುವದು-ಬಾರಿಸುವದು, ಲೌಕಿಕ-ಪಾರಮಾರ್ಥಿಕ ವಿಷಯಗಳನ್ನು ಚರ್ಚಿಸುವದು ಮುಂತಾದವುಗಳಲ್ಲಿ ಅವರು ಅಂತಿಂಥ ಗಂಡಸರ ಮುಖಭಂಗ ಮಾಡದೆ ಇರುತ್ತಿರಲಿಲ್ಲ. ಆ ಮನೆಯಲ್ಲಿ ಒಬ್ಬಿಬ್ಬ ಪ್ರೌಢಸುವಾಸಿನಿಯರೂ, ಒಬ್ಬಿಬ್ಬ ಪ್ರಾಯದ-ಲಗ್ನವಾದ-ಯುವತಿಯರೂ, ಎರಡು ಮೂರು ಜನ ಲಗ್ನಕ್ಕೆ ತಕ್ಕವರಾದ ಕುಮಾರಿಕೆಯರೂ ಇದ್ದರು. ಆ ಮನೆಯ ಯಜಮಾನರೊಬ್ಬರು ವೃದ್ಧರು; ೭-೮ ವರ್ಷದ ಒಬ್ಬ ಬಾಲಕನು; ಹಾಗು ಲಗ್ನವಾದ ಹೆಣ್ಣುಮಕ್ಕಳಲ್ಲಿಯ ಒಬ್ಬಳ ಗಂಡನಾದ ೩೦-೪೫ ವರ್ಷದ ಒಬ್ಬ ಗಂಡಸು, ಇಷ್ಟೇ ಜನ ಪುರುಷರಿದ್ದರು.

ಮನೆಯ ಯಜಮಾನರು ಪ್ರೌಢವಯಸ್ಸಿನಲ್ಲಿ ಒಳ್ಳೇ ಗೌರವಾನ್ವಿತರೂ, ಬುದ್ಧಿವಂತರೂ ಆಗಿದ್ದರು; ಆದರೆ ಈ ಇಳಿವಯಸ್ಸಿನಲ್ಲಿ ಅವರ ಉತ್ಸಾಹಭಂಗವಾಗಿ ಮನೆತನದ ಇಲ್ಲವೆ ಇತರ ಯಾವ ಉಸಾಬರಿಯನ್ನೂ ಮಾಡದೆ, 'ಹರಿ-ಹರಿ' ಎನ್ನುತ್ತ ಇರುತ್ತಿದ್ದರು. ನಡುಹರೆಯದ ಆ ಗಂಡಸು ಮೋಷಪಾತ್ರವಾಗಿದ್ದದರಿಂದ ಗಂಡನೆಂಬ ಹೆಸರಿಗೆ ತಕ್ಕವನಾಗಿರಲಿಲ್ಲ. ಎಂಟು ವರ್ಷದ ಹುಡುಗನಂತೂ ಪೋರನೇ. ಹೀಗೆ ಆ ಮನೆಯಲ್ಲಿ ಮೂವರು ಗಂಡಸರಿದ್ದರೂ, ಅವರ ವರ್ಚಸ್ಸು ಅಲ್ಲಿ ಸ್ವಲ್ಪವೂ ಇರಲಿಲ್ಲ. ಮನೆತನದ ಎಲ್ಲ ಕಾರ್ಯಗಳನ್ನು ಆ ಹೆಂಗಸರೇ ಒಳ್ಳೇ ಒಗರಿನಿಂದ ಸಾಗಿಸುತಲಿದ್ದರು. ಇದು ಅವರ ಮನೆತನಕ್ಕೆ ಒಂದು ಬಗೆಯಿಂದ ಉಚಿತವೂ ಭೂಷಣವೂ ಆಗಿದ್ದರೂ, ಅದರಿಂದ ಬರಬರುತ್ತ ಆ ಹೆಂಗಸರ ಸದ್ವರ್ತನಕ್ಕೆ ಕುಂದು ತರಲಾರಂಭಿಸಿತು. ಆ ಮನೆಯೊಳಗಿನ ಎಲ್ಲಕಕ್ಕೂ ಹಿರಿಯಳಾದವಳು ಒಳ್ಳೆ ಕಟ್ಟುನಿಟ್ಟಿನ ಸ್ವಭಾವದವಳಿದ್ದಳು. ಅವಳಿಗೆ ಹುಚ್ಚು-ಹುಳುಕುಗಳು ತಡೆಯುತ್ತಿರಲಿಲ್ಲ. ಅದರಿಂದ ಮೊದಮೊದಲು ಅವಳ

ಅನುಕರಣವನ್ನು ಉಳಿದ ಎಲ್ಲ ಮಹಿಳೆಯರೂ ಮನಃಪೂರ್ವಕವಾಗಿಯಾಗಲಿ, ಹೇಗೆಯೋ ಆಗಲಿ ಮಾಡುತ್ತಿದ್ದರು. ಮನುಷ್ಯನ ಸದ್ಗುಣವೃದ್ಧಿಗೆ ಅವನ ದೇಹದ ಆರೋಗ್ಯವು ಅತ್ಯವಶ್ಯವಾಗಿರುತ್ತದೆ. ಹೀಗಾಗದೆ ಯಾವುದೊಂದು ಇಲ್ಲವೆ ಹಲವು ಅವಯವಗಳು ವ್ಯಾಧಿಗ್ರಸ್ತವಾಗಿ ಇಲ್ಲವೆ ಇತರ ಕಾರಣಗಳಿಂದ ತಮ್ಮ ತಮ್ಮ ಕಾರ್ಯಗಳನ್ನು ಮಾಡದಿದ್ದರೆ ದೇಹದ ಆಟವು ಸರಿಯಾಗಿ ಸಾಗುವದಿಲ್ಲ. ದೇಹದ ಆಟವೇ-ನಿತ್ಯ ವ್ಯವಹಾರವೇ ಚನ್ನಾಗಿ ನಡೆಯದ ಬಳಿಕ ಅವನ ಮಾನಸಿಕ ತಂತ್ರವು ಸುರಳೀತವಾಗಿ ನಡೆಯುವ ಬಗೆ ಹೇಗೆ? ದೇಹ ಮನಸ್ಸುಗಳು ಸುವ್ಯವಸ್ಥಿತವಾಗಿ ನಡೆಯದ ಬಳಿಕ ಆ ಮನುಷ್ಯನಲ್ಲಿ ಉತ್ತಮ ಗುಣಗಳು ನೆಲಿಸುವ ಬಗೆ ಹೇಗೆ? ಪರಾವಲೋಕನದಿಂದ ಒಂದುವೇಳೆ ಅವು ಅವನಲ್ಲಿ ತಲೆದೋರಿದರೂ, ಮೇಲಿನ ಕಾರಣದ ಮೂಲಕ ಅವುಗಳಿಂದೂ ಅಭಿವೃದ್ಧಿ ಹೊಂದಲಾರವು. ಇದೇ ತತ್ವವು ನಮ್ಮ ಆ.....................ಮನೆಯ ಹೆಂಗಸರ ಸದ್ವರ್ತನಕ್ಕೆ ಅನ್ವಯಿಸುವದು. ಆ ಮನೆಯ ಹೆಂಗಸರು ಬುದ್ಧಿವಂತರೂ, ಕರ್ತವ್ಯತತ್ಪರರೂ ಆಗಿದ್ದರೂ ಈ ಪ್ರಪಂಚವೆಂಬ ಚಕ್ಕಡಿಯ ಒಂದು ಗಾಲಿಯು-ಪುರುಷವರ್ಗವು-ತೀರ ಅಪ್ರಯೋಜಕವಾದ್ದರಿಂದ ಆ ಶಕಟವು ಬರಬರುತ್ತ ಸರಿಯಾಗಿ ಸಾಗದಾಯಿತು. ಸ್ತ್ರೀಯು ಎಷ್ಟು ಕಟುನಿಟ್ಟಿನವಳಾದರೂ ತನ್ನ ಪುರುಷನ ಸಹಾಯವಿಲ್ಲದೆ ಈ ಭವಸಾಗರದಲ್ಲಿ ಅವಳು ತನ್ನ ನಾವನ್ನು ಸರಿಯಾಗಿ ಸಾಗಿಸಲಾರಳು. ನಮ್ಮ ಆ.................ಮನೆಯ ಯಜಮಾನತಿಗಾದರೂ ಹೀಗೆಯೇ ಆಗಿ, ಅವಳ ಸದ್ವರ್ತನದ ವರ್ಚಸ್ಸಿನ ಪರಿಣಾಮವು ಅವಳ ಮನೆಯ ತರುಣ ಹೆಂಗಸರ ಮೇಲೆ ಆಗದಾಯಿತು. ಬರಬರುತ್ತ ಅವರೆಲ್ಲರೂ ಅವಳ ಮಾತು ಕೇಳದಾಗಿ ಸ್ವೇಚ್ಛೆಯಿಂದ ವರ್ತಿಸಲಾರಂಭಿಸಿದರು. ಆ ಹಿರಿಯಳು ಎಷ್ಟು ನಿಷ್ಠುರಳಾದರೂ ತನ್ನ ಹೊಟ್ಟೆಯ ಹೆಣ್ಣುಮಕ್ಕಳ ವರ್ತನದ ಬಗ್ಗೆ ಸ್ಪೈಷ್ಠುರ್ಯವನ್ನು ತಾಳಲಾರದೆ, ಅದಕ್ಕೆ ಮುಚ್ಚುಮರೆಯ ಆವರಣವನ್ನು ಹಾಕಹತ್ತಿದಳು. ಹೀಗಾಗಿ ಆ ಮನೆಯ ಹೆಂಗಸರ ಬಗ್ಗೆ ನೆರೆಹೊರೆಯವರು ಕುಚುಕುಚು ಎಂದು ಕಿವಿ ಕಚ್ಚಾಡಹತ್ತಿದರು.

ಶಿತಿಕಂಠನು ಆ ಹುಡುಗೆಯರಿಗೆ ಮೊದಮೊದಲು ಕನ್ನಡ ಓದ ಹೇಳಹತ್ತಿದನು. ಅವರು ಈ ಮೊದಲು ೩-೪ ಕ್ಲಾಸುಗಳ ವರೆಗೆ ಕನ್ನಡ ಅಭ್ಯಾಸ ಮಾಡಿದ್ದರಲ್ಲದೆ, ಮನೆಯಲ್ಲಿಯೂ ದಿನಾಲು ಓದುವದು ಬರೆಯುವದು ಇದೇ ವ್ಯಾಸಂಗದಲ್ಲಿ ಕಾಲಹರಣ ಮಾಡುತ್ತಿದ್ದರಾದ್ದರಿಂದ ಅವರ ಕನ್ನಡ ಭಾಷಾಜ್ಞಾನವು ಅವರ ವಯಸ್ಸಿನ ಮಾನದಿಂದ ಚನ್ನಾಗಿ ಆಗಿತ್ತು. ವಾರೆರಡು ವಾರಗಳಲ್ಲೇ ತಾನು ಇವರಿಗಿಂತ ಈ ವಿದ್ಯೆಯಲ್ಲಿ ಅಲ್ಪಜ್ಞನೆಂಬದು ಹೊಳೆಯಲು,

ಕೂಡಲೆ ಶಿತಿಕಂಠನು ಆ ಹುಡುಗೆಯರಿಗೂ ಮನೆಯ ಹಿರಿಯಳಿಗೂ ಏನೇನೋ ಪ್ರೌಢಿ ಹೇಳಿ, ಅವರಿಗೆ ಸಂಸ್ಕೃತ ಕಲಿಸಲು ಪಕ್ರಮಿಸಿದನು. ಸಂಸ್ಕೃತವು ಆ ಹುಡುಗೆಯರಿಗೆ ಬಾರದಿದ್ದರೂ ಆ ಮನೆಯ ಹಿರಿಯಳು ತನ್ನ ವಿದ್ಯಾರ್ಥಿದೆಸೆಯಲ್ಲಿ ತಕ್ಕಮಟ್ಟಿಗೆ ನೋಡಿಕೊಂಡಿದ್ದಳು. ಅದರಿಂದ ಶಿತಿಕಂಠನು ಸಂಸ್ಕೃತವನ್ನು ಅವಳೆದುರಿಗೆ ಆ ಹುಡುಗೆಯರಿಗೆ ಕಲಿಸಲಸಮರ್ಥನಾದನು. ತದನಂತರ ಆತನು ಅವರಿಗೆ ಇಂಗ್ಲಿಷ ಹೇಳಿಕೊಡಲಾರಂಭಿಸಿದನು. ಅವನು ಯಾವ ಭಾಷೆಯನ್ನೂ, ಯಾವ ವಿದ್ಯೆಯನ್ನೂ, ಸುಸಂಗತವಾಗಿ ಅಭ್ಯಾಸ ಮಾಡಿರಲಿಲ್ಲ. ಅದರಿಂದ ಪ್ರತಿಯೊಂದರಲ್ಲಿ ಅವನ ಆಟವೇ ನಿಂತು ಹೋಗುತ್ತಿತ್ತು. ಆದರೂ ಉಳಿದ ಎರಡು ಭಾಷೆಗಳಿಗಿಂತ ಇಂಗ್ಲಿಷ ಅಭ್ಯಾಸವನ್ನು ಆ ಹುಡುಗೆಯರಿಗೆ ಜೋರಾಗಿ ಹೇಳಿಕೊಡಹತ್ತಿದನು.

ಆ ಮನೆಯ ಹೆಣ್ಣುಹುಡುಗೆಯರಲ್ಲಿ ೨-೩ ಜನ ಕುಮಾರಿಕೆಯರಿದ್ದರಷ್ಟೆ? ಅವರಲ್ಲಿ ಎಲ್ಲಕ್ಕೂ ದೊಡ್ಡ ಕನ್ನಿಕೆಯು ೧೪ ವರ್ಷ ಏರಿದವಳಾಗಿ ಉಪವರಳಾಗಿದ್ದಳು. ಮನೆಯ ಯಜಮಾನನಂತೂ ಲಗ್ನಮುಂತಾದ್ದರ ಗೊಡವೆಗೆ ಹೋಗುವಂತಿದ್ದಿಲ್ಲ. ಮೋಷಪಾತ್ರದಂತಿದ್ದ ಆ ನಡುಹರೆಯದ ಗಂಡಸು-ಕೇವಲ ನಾಮಮಾತ್ರ ಗಂಡಸೇ ಆಗಿದ್ದುದರಿಂದ ಸಮಾಜದಲ್ಲಿಯೂ ಮನೆಯಲ್ಲಿಯೂ ಅವನಿಗೆ ಯಾವ ಗೌರವವೂ ಇರಲಿಲ್ಲ. ಆದರಿಂದ ಈ ಲಗ್ನ-ವರಾನ್ವೇಷಣದಂಥ ಜವಾಬುದಾರಿಯ ಕೆಲಸಕ್ಕೆ ಅವನು ಕೇವಲ ಅಯೋಗ್ಯನಾಗಿದ್ದನು. ಹುಡುಗನಂತೂ ಹುಡುಗನೇ! ಹೀಗಾಗಿ ಆ ಉಪವರ ಕನ್ಯೆಗೆ ವರನನ್ನು ಹುಡುಕಿ ಲಗ್ನ ನಿಶ್ಚಯಿಸುವ ಕೆಲಸದ ಭಾರವು ಆ ಮನೆಯ ಹಿರಿಯಳ ಮೇಲೆಯೇ ಬಿದ್ದಿತ್ತು. ಆ ಹಿರಿಯಳು ತಮ್ಮ ಮನೆಗೆ ಹಿರಿಯಳಾದ ಮಾತ್ರಕ್ಕೆ ಸಮಾಜದಲ್ಲಿ ಆಕೆಯ ಬೆಳಕೆಷ್ಟು ಬೀಳಬೇಕು? ಇವೆಲ್ಲ ತೊಂದರೆಗಳ ಮೂಲಕ ಆಹುಡುಗೆಯ ಲಗ್ನವು ಈಗೆರಡು ವರ್ಷಗಳಿಂದ ಮುಂದೆ ಮುಂದೆಯೇ ಬೀಳುತ್ತ ನಡೆದಿತ್ತು.

ಶಿತಿಕಂಠನು ಅವರ ಮನೆಗೆ ಬಂದ ಕೆಲದಿನಗಳ ವರೆಗೆ ತನ್ನ ಮನೆತನದ ಸ್ಥಿತಿಗತಿಗಳನ್ನು ಯಾರಿಗೂ ತಿಳಿಸಿದ್ದಿಲ್ಲ. ಅವರ ಮನೆಯ ವ್ಯವಸ್ಥೆ, ಲಗ್ನವಾಗದ ಅವರ ಕುಮಾರಿಕೆಯರು ಮುಂತಾದ ಸಂಗತಿಗಳನ್ನು ಪರಿಶೀಲಿಸಿದ ಬಳಿಕ ಅವನು ತನ್ನ ಮನೆತನದ ಸ್ಥಿತಿಗತಿಗಳನ್ನು ಹೇಳಲಾರಂಭಿಸಿದನು. ನಾನು ಬೆಂಗಳೂರ ಕಡೆಯ............ಊರ ಜಹಗೀರದಾರರ ಮಗನು. ನನ್ನ ತಂದೆಯ ಜಹಗೀರಿನಿಂದ ವರ್ಷಕ್ಕೆ ೧೦-೮ ಸಾವಿರ ರೂಪಾಯಿಗಳ ಉತ್ಪನ್ನವು ಬರುತ್ತಿದೆ. ನನಗೆ ಅಣ್ಣತಮ್ಮಂದಿರಾರೂ ಇಲ್ಲ. ಒಬ್ಬಳೇ ಒಬ್ಬಳಾಗಿರುವ ತಂಗಿಯನ್ನು...........ಊರ ಇನಾಮದಾರರಿಗೆ ಕೊಟ್ಟು ಕಳೆದ ವರ್ಷವೇ ಲಗ್ನ

ಮಾಡಿರುವರು. ನಮ್ಮ ತಂದೆ-ತಾಯಿಗಳು ನಮ್ಮೂರಲ್ಲಿಯೇ ಇದ್ದು, ನಮ್ಮ ಜಹಗೀರಿನ ಉಪಭೋಗ ಮಾಡುತ್ತಿರುತ್ತಾರೆ. ನಾನು ಇನ್ನೂ ವಿದ್ಯಾರ್ಥಿದೆಸೆಯಲ್ಲಿರುವದರಿಂದ ಮನೆತನದ ಚಿಂತೆಯು ನನಗಾವ ಬಗೆಯಿಂದಲೂ ಇಲ್ಲವೆಂದೂ, ಆಯ್. ಸಿ. ಎಸ್. ಪರೀಕ್ಷೆಯ ವರೆಗೆ ನಾನು ಓದತಕ್ಕವನಿದ್ದು, ನನ್ನ ತಾಯಿ-ತಂದೆಗಳಾದರೂ ಅದಕ್ಕಭಿಮತಿಗಳಾಗಿರುವರೆಂತಲೂ ಹೇಳಿದನು. ಅವನು ಆ ಮನೆ ಹೊಕ್ಕಾಗಿನಿಂದಲೂ ಆ ಮನೆಯವರ ಶಾಖೆಯವನೆಂತಲೇ ತಿಳಿಸಿದ್ದನು. ಶಿತಿಕಂಠನ ಬುದ್ಧಿಚಾತುರ್ಯ, ವಿದ್ವತ್ತೆ, ಮನೆತನದ ಸ್ಥಿತಿ, ರೂಪ, ವಯಸ್ಸು, ಮಿಷ್ಟಭಾಷಣ, ವಿಧೇಯತ್ವದ ನಡತೆ ಇವುಗಳನ್ನೆಲ್ಲ ಕಂಡು, ಅದಾವ ಹೆಣ್ಣಿನ ತಾಯಿಗೆ ಇವನು ತನಗೆ ಅಳಿಯನಾಗಬೇಕೆಂದು ಅನಿಸಲಿಕ್ಕಿಲ್ಲ? ಅವನಿದ್ದ ಆ ಮನೆಯ ಹಿರಿಯಳಂತೂ ತನ್ನ ಮಕ್ಕಳಿಗೆ ವರನನ್ನು ಹುಡುಕುವವರು ಕೂಡ ಗತಿಯಿಲ್ಲದಾಗಿರಲು, ಇಂಥ ದಿವ್ಯ ವರನು ತಾನಾಗಿ ತನ್ನ ಮನೆಯ ಬಾಗಿಲಿಗೆ ಬಂದಿರಲು, ಇವನು ತನಗೆ ಅಳಿಯನಾಗಬೇಕೆಂದು ಯೋಚಿಸಿದ್ದರೆ ಆಶ್ಚರ್ಯವೇನು?

ವರಾನ್ವೇಷಣ ದೃಷ್ಟಿಯಿಂದ ಆ ಹಿರಿಯಳು ನಮ್ಮ ಶಿತಿಕಂಠನೊಡನೆ ಒಂದೆರಡು ಸಾರೆ ಮಾತೆತ್ತಲಿಕ್ಕೂ ಅದೇ ಸಮಯಕ್ಕೆ ಆತನ ಹೆಸರಿಗೆ "ಮಗೂ, ಶಿತಿಕಂಠ, ನಾವು ನಿಶ್ಚಯಿಸಿದ ಕನ್ಯೆಯು ನಿನಗೆ ಸಮ್ಮತವಿಲ್ಲೆಂಬದನ್ನು ನಿನ್ನ ಮಿತ್ರರ ಮುಖಾಂತರ ಕೇಳಿ ತಿಳಿದೆವು. ಅದೇ ಕನ್ಯೆಯನ್ನು ವರಿಸಬೇಕೆಂದು ನಾವೇನೂ ನಿನಗೆ ಒತ್ತಾಯ ಮಾಡುವದಿಲ್ಲ. ನಮ್ಮ ಕುಲ-ಶೀಲಗಳಿಗೆ ತಕ್ಕವಳಾದ ಆದರೆ, ಕೇವಲ ನಿನ್ನ ಮನಸ್ಸಿಗೆ ಒಪ್ಪಬಹುದಾದ ಕನ್ಯೆಯನ್ನೇ ಆರಿಸಿ ನಮಗೆ ಬರೆ. ಕೂಡಲೆ ನಾವು ಬಂದು ಲಗ್ನ ನಿಶ್ಚಯಮಾಡುವೆವು ನಮಗೊಬ್ಬನೇ ಮಗನಾದ ನಿನ್ನ ಮನಸ್ಸಿನ ವಿರುದ್ಧವಾಗಿ ನಡೆಯುವ ಇಚ್ಛೆಯಾಗಲಿ, ಹಟವಾಗಲಿ ನಮ್ಮದಿಲ್ಲೆಂಬದನ್ನು ನಿನಗೆ ಪತ್ರಬರೆದು ತಿಳಿಸುವ ಕಾರಣವಿಲ್ಲ. ನೀನು ಅಲ್ಲಿ ಇನ್ನು ಎಷ್ಟು ದಿವಸಗಳ ವರೆಗೆ ಇರುತ್ತೀಯೆ? ಬೊಂಬೈ ಕಡೆಗೆ ಹೊರಡುವದಾದರೆ ಕಲ್ಯಾಣ ಕಾರ್ಯವನ್ನು ಮಾಡಿಕೊಂಡೇ ತೆರಳು. ಖರ್ಚಿಗೆ ಬೇಕಾದರೆ ಬರೆ, ಚೆಕ್ಕು ಕಳಿಸುವೆವು." ಎಂಬ ಸಂಗತಿಯ ಒಂದೆರಡು ಕಾರ್ಡುಗಳು ಬಂದಿದ್ದವು. ಆ ಪತ್ರಗಳನ್ನು ತಾನಾಗಿ ಅವರಿಗೇನೂ ಓದಿ ಹೇಳಿರಲಿಲ್ಲ, ಇಲ್ಲವೆ ತೋರಿಸಿಯೂ ಇರಲಿಲ್ಲ; ಆದರೆ ಅವನು ಅವುಗಳನ್ನು ಆ ಹುಡುಗೆಯರ ನಿತ್ಯ ಪಾಠದ ಪುಸ್ತಕಗಳ ಯಾವುದೊಂದು ಪಾನಿನಲ್ಲಿ ಬುದ್ಧಿಪುರಃಸರವಾಗಿ ಸೇರಿಸಿಡುತ್ತಿದ್ದನು ಮಾತ್ರ. ಆ ಪತ್ರಗಳನ್ನು ಎಲ್ಲಕ್ಕೂ ಮೊದಲು ಆ ಉಪವರ ಕನ್ಯೆಯು ಓದಿಕೊಳ್ಳಬೇಕೆಂಬ ಅವನ ಮನೋಗತದಂತೆ ಅವಳು ಸಹಜವಾಗಿ ಓದಿ ಅದನ್ನು ತನ್ನ ಅಕ್ಕನಿಗೆ ತೋರಿಸಬೇಕು; ಅಕ್ಕನು ಅಮ್ಮನಿಗೆ ತೋರಿಸ

ಬೇಕು. ಹೀಗೆ ನಮ್ಮ ಶಿತಿಕಂಠನ ಆ ಪತ್ರಗಳ ಸುದ್ದಿಯು ತಾನಾಗಿಯೇ ಹಬ್ಬುತ್ತಿತ್ತು.

ಶಿತಿಕಂಠನು ನಮ್ಮೂರಿಗೆ ಬಂದದ್ದು ಪಕ್ಷಮಾಸ ಪ್ರಾರಂಭದಲ್ಲಿ; ಆದರೆ ಅವನ ಕೌಶಲ್ಯದಿಂದಲೋ, ಅಥವಾ ದೈವೀಸಂಕಲ್ಪದಿಂದಲೋ ಇಲ್ಲವೆ ಆ ಮನೆಯ ಹೆಂಗಸರ ಆತುರದಿಂದಲೋ ಆ ಅಪರಿಚಿತನ ಪ್ರಸ್ಥವು ಆ ಮನೆಯಲ್ಲಿ ಬಹು ತೀವ್ರ ಅಂದರೆ ಒಂದು-ಒಂದೂವರೆ ತಿಂಗಳಲ್ಲೇ ಬೆಳೆಯಿತು. ಅವನು ಆ ಮನೆಯವರ ಕೊರಳೊಳಗಿನ ತಾಯಿತನಾದನು. ಪ್ರತಿಯೊಂದು ವಿಷಯದಲ್ಲೂ ಶಿತಿಕಂಠನ ಅಭಿಪ್ರಾಯವನ್ನು ಆ ಮನೆಯವರು ಕೇಳಿಕೊಳ್ಳಹತ್ತಿದರು. ಆತನು ಹೇಳುತ್ತಿದ್ದ ಪಾಠಪ್ರವಚನಗಳಂತೂ ಹಗಲು-ರಾತ್ರಿ ಎಡಬಿಡದೆ ನಡೆದವು. ಆ ಹುಡುಗಿಯರು ಹುಟ್ಟು ಬುದ್ಧಿವಂತೆಯರು. ಅದರಲ್ಲಿ ತಮ್ಮೊಡನೆ ಉಂಡುಟ್ಟು ಕೂಡಿದ್ದವನ ಸಹವಾಸದಲ್ಲಿ ಅವರ ಅಭ್ಯಾಸವು ನಡೆಯ ಹತ್ತಿದ ಬಳಿಕ ಕೇಳುವದೇನು? ನವರಾತ್ರಿ ಮುಗಿಯುವಷ್ಟರಲ್ಲಿ ಅವನು ಅವರಿಗೆ ಇಂಗ್ಲಿಷ ಪ್ರೈಮರದೊಳಗಿನ, "ಕ್ಯಾಟ್, ಡಾಗ್, ನಾಟ, ಗೋಟ" ಮುಂತಾದ ಶಬ್ದಗಳನ್ನು ಕಲಿಸಿದನು. ನವರಾತ್ರಿಯ ಕೊನೆಯಲ್ಲಿ ಶ್ರೀನಿವಾಸನ ಕಲ್ಯಾಣವಾದ ಕೂಡಲೆ ನಮ್ಮ ಬ್ರಾಹ್ಮಣ ವರ್ಗವು ತಮ್ಮ ವಧೂವರರ ಮಂಗಲ ಕಾರ್ಯಗಳ ಆಲೋಚನೆಗೊಳಗಾದರು. ಇದೇ ರಿವಾಜಿಗನುಸರಿಸಿ ಆ ಮನೆಯ ಹಿರಿಯಳೂ ತನ್ನ ಉಪವರ ಕನ್ಯೆಗಾಗಿ ವರಾನ್ವೇಷಣದ ಕಾರ್ಯವನ್ನು ಚಟುವಟಿಕೆಯಿಂದ ನಡಿಸಿದಳು.

ಕೆಲ ದಿನಗಳ ವರೆಗೆ ಅತ್ತ ಇತ್ತ ಪತ್ರ ಬರೆಯಿಸುವ ಇಲ್ಲವೆ ತಮ್ಮ ಆಪ್ತೇಷ್ಟರಿಗೆ ಹೇಳಿ ಕಳುಹಿಸುವ ಪ್ರಯತ್ನ ಸಾಗಿದವು. ಆ ಪತ್ರಗಳನ್ನೆಲ್ಲ ಈಚೆಗೆ ನಮ್ಮ ಶಿತಿಕಂಠನೇ ಬರೆಯುತ್ತಿದ್ದನು. ಅವುಗಳಲ್ಲಿಯ ಒಂದಕ್ಕೂ ಯಶದೊರೆಯಲಿಲ್ಲ. ಕೆಲಕೆಲವು ಖಾತ್ರಿಯ ಜನರ ಕಡೆಯಿಂದ ಉತ್ತರ ಕೂಡ ಬರಲಿಲ್ಲ. ಅದರಿಂದ ಶಿತಿಕಂಠನು ಆ ಪತ್ರಗಳನ್ನು ಟಪಾಲಿನ ಪೆಟ್ಟಿಗೆಯಲ್ಲಿ ಚಲ್ಲುತ್ತಿದ್ದನೋ, ಇಲ್ಲವೆ ಮುನಸಿಪಾಲಿಟಿಯ ಕಚರಾ ಪೆಟ್ಟಿಗೆಯಲ್ಲಿ ಚಲ್ಲುತ್ತಿದ್ದನೋ? ಎಂಬ ಬಗ್ಗೆ ವಾಚಕರಂತೆ ನಮಗೂ ಸಂಶಯ ಬರುತ್ತಿದೆ! ಹೀಗೆ ಪತ್ರಮುಖಾಂತರದ ಪ್ರಯತ್ನವು ಆಶ್ವೀಜಮಾಸದ ಕೊನೆಯ ವರೆಗೂ ನಡೆಯಿತು. ಅಷ್ಟರಲ್ಲಿ ಶಿತಿಕಂಠನ ಹೆಸರಿಗೆ ಅವನ ತಂದೆಯ ಕಡೆಯಿಂದ ಮೇಲೆ ಬರೆದ ೨-೩ ಪತ್ರಗಳು ಬಂದವು. ಅವನ್ನೆಲ್ಲ ಯಥಾಕ್ರಮದಂತೆ ಆ ಮನೆಯ ಎಲ್ಲ ಹೆಣ್ಣು ಮಕ್ಕಳೂ ಮನಸ್ಸುಗೊಟ್ಟು ಓದಿದರು. ಕಡೆಗೆ ಬೇರೆ ವರನನ್ನು ಹುಡುಕಲು ಪ್ರಯತ್ನಿಸುವದಕ್ಕಿಂತ ತಮ್ಮಲ್ಲಿ ಬಂದಿರುವ ಈ ಜಹಾಗೀರದಾರರ ಮಗನಿಗೇ

ತಮ್ಮ ಮಗಳನ್ನು ಕೊಡಬೇಕೆಂದು ಆ ಮನೆಯ ಹೆಂಗಳೆಯರು ತಮ್ಮ ತಮ್ಮೊಳಗೆ ಗೊತ್ತು ಮಾಡಿಕೊಂಡು ಶಿತಿಕಂಠನಿಗೆ ಆ ಬಗ್ಗೆ ಒಂದು ದಿನ ಸ್ಪಷ್ಟವಾಗಿ ಕೇಳಿದರು. "ನಾನೀಗಲೆ ಲಗ್ನವಾಗುವದಿಲ್ಲೆ"ಂದು ಆತನು ಮೊದಲು ಹೇಳಿದನು. ತನ್ನ ಮನೋಗತವು ಈಡೇರುವ ಈ ಪ್ರಸಂಗದಲ್ಲಿ ಇನ್ನು ಹೆಚ್ಚು ಜಗ್ಗಿ ಹಿಡಿಯುವದು ತಕ್ಕದ್ದಲ್ಲವೆಂದು ಬಗೆದು, "ಇಲ್ಲಿ ನಾನಿರುವ ಮನೆಯಲ್ಲಿ ಸ ಶೀಲ ಹಾಗು ಮನೋಹರ ಕನ್ಯೆಯಿರುವಳು. ಅವಳು ವಯಸ್ಸಿನಿಂದಲೂ, ಗುಣ, ರೂಪ, ಶೀಲ, ವಿದ್ಯೆ ಮುಂತಾದ ಎಲ್ಲ ಬಗೆಯಿಂದಲೂ ನನಗೆ ತಕ್ಕವಳಾಗಿರುವಳೆಂದು ನನ್ನ ಅಭಿಪ್ರಾಯುವಿದೆ; ಆದರೆ ಅವರು ನಮ್ಮ ಮನೆತನಕ್ಕೆ ತಕ್ಕಷ್ಟು ಸಧನ ಸ್ಥಿತಿಯವರಲ್ಲ. ಅದರಿಂದ ನೀವು ನನಗಾಗಿ ಆ ಕನ್ಯೆಯನ್ನು ಲಗ್ನ ಮಾಡಲಿಕ್ಕೆ ಸಿದ್ಧರಾದರೆ ಮಾತ್ರ, ನಾನೀ ಜನ್ಮದಲ್ಲಿ ಲಗ್ನವಾಗುವೆನು; ಇಲ್ಲದಿದ್ದರೆ ಇಲ್ಲ. ಒಂದು ವಾರದಲ್ಲಿ ನಿಮ್ಮಿಂದ ಅನುಕೂಲ ಅಭಿಪ್ರಾಯದ ಪತ್ರವು ಬಂದರೆ ಮಾತ್ರ ನಾನು ನಿಮಗೆ ಮುಂದೆ ಭೆಟ್ಟಿಯಾಗುವೆನು. ಇಲ್ಲದಿದ್ದರೆ ಇದೇ ಪತ್ರದಿಂದಲೇ ನನ್ನ ನಿಮ್ಮ ಕೊನೆಯ ದೃಷ್ಟಾದೃಷ್ಟವು"ಎಂಬ ಸಂಗತಿಯ ಒಂದು ಕಾರ್ಡನ್ನು ಬರೆದು, ಅದನ್ನು ಆ ಹುಡುಗರ ಪುಸ್ತಕದಲ್ಲಿ ಎಂದಿನಂತೆ ಇಟ್ಟನು. ಮರುದಿನ ಸಂಜೆಯೊಳಗಾಗಿ ಆ ಪತ್ರದ ಸಂಗತಿಯು ಆ ಮನೆಯಲ್ಲೆಲ್ಲ ಹರಡಿತು; ಆದರೆ ಮುಂದೆ ಕೆಲ ಹೊತ್ತಿನ ಮೇಲೆ ಅವರು ಆ ಪತ್ರವನ್ನು ಪುನಃ ಓದಬೇಕೆಂದು ನೋಡಲು, ಅದು ಎಲ್ಲಿಯೂ ಸಿಗಲಿಲ್ಲ. ಅದರಿಂದ ಆ ಪತ್ರದ ಸಂಗತಿಯನ್ನು ಅವರು ಅವನಿಗೆ ಬಾಯಿಬಿಚ್ಚಿ ಕೇಳಲಿಲ್ಲ; ಆದರೆ ಅಂದಿನಿಂದ ಅವರು ಹಿಗ್ಗಿದ ಮನಸ್ಸಿನವರಾಗಿ ಅವನನ್ನು ಹೆಚ್ಚಾಗಿ ಆದರಿಸಲಾರಂಭಿಸಿದರು.

ಅವನು ಮೂಡಣಗಡೆಯವನಾದುದರಿಂದ ಅಭ್ಯಂಗಸ್ನಾನದ ಆಡಂಬರವು ಅವನಲ್ಲಿ ಹೆಚ್ಚಾಗಿದ್ದಿತು. ಇಷ್ಟು ದಿನಗಳ ವರೆಗೆ ಅವನು ಆ ಮನೆಯವರ ಸಹಾಯುಪಡೆಯದೆ ತನ್ನಷ್ಟಕ್ಕೆ ತಾನೇ ಆ ಕರ್ಮವನ್ನು ತೀರಿಸಿಕೊಳ್ಳುತ್ತಿದ್ದನು; ಆದರೆ ಇತ್ತೀಚೆಗೆ ಅವನ ಆ ಅಭ್ಯಂಗದ ಸಿದ್ಧತೆಗಾಗಿ ಮನೆಯ ಹಿರಿಯಳನ್ನು ಮೊದಲು ಮಾಡಿಕೊಂಡು ಆ ಉಪವರ ಕನ್ಯೆಯವರೆಗೆ ಎಲ್ಲರೂ ತತ್ಪರರಾಗಿರುತ್ತಿದ್ದರು. ಬರಬರುತ್ತ ಶಿತಿಕಂಠನ ಪಿತ್ಥವು ತಲೆಗೇರಿದ್ದರಿಂದಲೊ, ಇಲ್ಲವೆ ಆ ತರುಣಿಯರು ಉನ್ಮಾದರಾದ್ದರಿಂದಲೋ ಅವನ ಅಭ್ಯಂಗಸ್ನಾನವು ಹಗಲಿನ ನಾಲ್ಕು ಪ್ರಹರಗಳನ್ನು ಅಲ್ಲಗಳೆದು ರಾತ್ರಿಯ ದ್ವಿತೀಯ ಯಾಮದ ವರೆಗೆ ಮನಸ್ಸು ಬಂದಾಗ ನಡೆಯಲಾರಂಭಿಸಿತು. ಮೂಡಣಗಡೆಯವರ ಅಭ್ಯಂಗ, ಕ್ಷೌರಗಳನ್ನು ನೋಡುವದೊಂದು ಪ್ರಾಚೀನಕರ್ಮವೆಂದೇ ನಮ್ಮ ಉತ್ತರ

ಕರ್ನಾಟಕದವರಾಡಿಕೊಳ್ಳುವ ಮಾತು ಸುಳ್ಳಲ್ಲ! ಶಿತಿಕಂಠನ ಅಭ್ಯಂಗವನ್ನು ನೋಡಲಿಕ್ಕೆ ನಮ್ಮೂರ ಎಷ್ಟೋ ಹುಡುಗರು ಹೊಂಚುಹಾಕಿಕೊಂಡು ಕೂಡ್ರುತ್ತಿದ್ದವು. ಆತನ ಕ್ಷೌರ, ಅಂಗಾಲಿನಿಂದ ನಡುನೆತ್ತಿಯ ವರೆಗೆ ಬೋರುಗಲ್ಲಿಗೆ ಒಡೆದಂತೆ ಹರಳೆಣ್ಣೆಯ ಲೇಪ, ಮೂರು ನಾಲ್ಕು ಹಂಡೆ ಕಾದು ಎಸರುಬರುವ ನೀರು, ಅಭ್ಯಂಗ ಸ್ನಾನಾನಂತರದ ಬೆವರು ತೆಗೆಯಲಿಕ್ಕಾಗಿ ಮಾಡುವ ವಿಚಿತ್ರ ಪ್ರಕಾರದ ಶಯನ ಇವುಗಳೆಲ್ಲ ನಮ್ಮಲ್ಲಿಯ ಮಕ್ಕಳುಗಳಿಗೆ ಮರ್ಕಟ ಚೇಷ್ಟೆಯ ವಿಷಯವಾಗಿದ್ದವು. ಅವನು ಹಾಗೆ ಸ್ನಾನಮಾಡಲಿಕ್ಕೆ ಸಿದ್ಧನಾದ ಬಗ್ಗೆ ನಮ್ಮಲ್ಲಿಯ ದೊಡ್ಡವರು ಅಚ್ಚರಿಪಡುತ್ತಿರಲಿಲ್ಲ; ಆದರೆ ಏನೂ ಸಂಬಂಧವಿಲ್ಲದ ಕೇವಲ ಅಪರಿಚಿತ ತರುಣನಿಗೆ ಅವನ ಆ ಅವಸ್ಥೆಯಲ್ಲಿ ಸುತ್ತಲೂ ನಾಲ್ಕಾರು ಜನ ತರುಣಿಯರು ಸೇರಿ ಅಭ್ಯಂಗಸ್ನಾನ ಮಾಡಿಸುವದು ನಮ್ಮಲ್ಲಿಯ ಪ್ರತಿಯೊಬ್ಬರಿಗೂ ಚರ್ಚೆಯ ವಿಷಯವಾಯಿತು. ಬೆಣ್ಣೆಯು ಎಷ್ಟು ತಂಪಾದರೂ, ಗಟ್ಟಿಯಾದರೂ ಬೆಂಕಿಯ ಸಮೀಪಕ್ಕೆ ಹೋದೊಡನೆ ಅದು ಹೇಗೆ ಕರಗಿ ನೀರಾಗುವದೋ, ಹಾಗೆಯೇ ತರುಣ-ತರುಣಿಯರು ಕೇವಲ ಏಕಾಂತ ಹಾಗು ರಾತ್ರಿಯ ದ್ವಿಪ್ರಹರದಲ್ಲಿ ಒಟ್ಟಾಗಿ ಸೇರುವದರಿಂದ ಏನಾದರೂ ಅನಾಹುತವು ಖಂಡಿತವಾಗಿ ಆಗಲೇಬೇಕೆಂದು ನಮ್ಮಲ್ಲಿಯ ಎಲ್ಲರ ಅಭಿಪ್ರಾಯವಾಗಿತ್ತು. ಆದರ ನಿಜಾಂಶವನ್ನೂ, ಆ ಮನೆಯ ಹೆಂಗಸರ ಹಾಗು ಶಿತಿಕಂಠನ ಪಾಪಪುಣ್ಯಾಚರಣೆಗಳ ವಿಷಯವನ್ನೂ ಅವರನ್ನು ಸದಾ ಎವೆಯಿಕ್ಕದೆ ನೋಡುತಲಿದ್ದ ವೈ. ವಾ. ವಿಷ್ಣುವೇ ಬಲ್ಲನು! ಅನ್ಯರೇನು ತಿಳಿಯಬೇಕು?

ಹೀಗೆ ಶಿತಿಕಂಠನು ಬಂದು ಆ ಮನೆಯ ಹೆಂಗಳೆಯರಲ್ಲಿ ಬೇರೂರಿದಂದಿನಿಂದ ಆ ಮನೆಯವರು ನಮ್ಮಲ್ಲಿಯ ಎಲ್ಲ ಜನರ ಆಡಿಕೊಳ್ಳುವ ವಿಷಯವಾಗಿದ್ದರು. ಕೆಲಕೆಲವು ನಿಸ್ಪೃಹ ಸ್ವಭಾವದವರು ಅವರ ಆ ಗೊಂದಲವನ್ನು ಕೇಳಲಾರದೆ-ನೋಡಲಾರದೆ, ಆ ಮನೆಯ ಹಿರಿಯನೆದುರಿಗೆ ಆ ಬಗ್ಗೆ ಮಾತೆತ್ತುತ್ತಿದ್ದರು ಸಹ; ಆದರೂ ಆ ಮನೆಯ ಹೆಂಗಸರು ಎಚ್ಚರಪಡಲಿಲ್ಲ. ಕಡೆಗೆ ಶಿತಿಕಂಠನಿಗೆ ಮತ್ತೊಂದು ಪತ್ರವು ಅಶ್ವಿಜಬಹುಳ ತ್ರಯೋದಶಿಯ ದಿವಸ ಬಂದಿತು. ಅದರಲ್ಲಿ ಹೀಗೆ ಬರೆದಿತ್ತು:—

"ಮಗು, ಶಿತಿಕಂಠ! ನಿನ್ನ ಪತ್ರ ಬಂತು. ನೀನು ಅಷ್ಟೇಕೆ ರೇಗಬೇಕೋ ನಾವರಿಯೆವು. ನಾವು ನಿನ್ನ ಮಾತಿಗೆ ಹೊರತಾಗಿಲ್ಲ. ನೀನು ವರಿಸಬಯಿಸಿದ ಕನ್ಯೆಯೊಡನೇ ನಿನ್ನ ಮಂಗಲಕಾರ್ಯವನ್ನು ಮಾಡುವೆವು. ನಾವು ಇಂದೇ ಅಲ್ಲಿಗೆ ಬರತಕ್ಕವರಿದ್ದೆವು; ಆದರೆ ನಿನ್ನ ತಂಗಿ ಶಾರದೆಯು ಈಗ ೭ ತಿಂಗಳು ಬಸುರು. ಅವಳನ್ನು ಅಲ್ಲಿಗೆ ಕರೆತರಲು ನಮಗೇ ಸಂಕೋಚ. ಆಕೆಯನ್ನು

ಬಿಟ್ಟು ನಾವೀರ್ವರೇ ಬರುವದೂ ಸರಿ ಕಾಣದು. ಆದುದರಿಂದ ನೀನು ಈ ನಮ್ಮ ಪತ್ರವನ್ನು ಆ ಮನೆಯ ಹಿರಿಯರಿಗೆ-ಹಿರಿಯಳಿಗೆ ತೋರಿಸು. ಅವರೆಲ್ಲರೂ ಕನ್ಯೆಯೂ ನೀನೂ ನಾಳಿನ ಸಂಜೆಯ ರೈಲಿಗೆ ಹೊರಟು ಬನ್ನಿರಿ. ಇಲ್ಲಿ ನಿನ್ನ ತಂಗಿಯು ತನ್ನ ಅತ್ತಿಗೆಯನ್ನು ನೋಡುವ ಹಂಬಲಪಡುವಳು. ಮಗೂ, ನಿನ್ನಂತೆ ಅವಳೂ ನಮಗೊಬ್ಬಳೇ ಮಗಳಾದುದರಿಂದ ಆಕೆಯ ಇಷ್ಟಾರ್ಥವನ್ನು ಪೂರೈಸಬೇಕಲ್ಲವೆ? ನೀವು ಇಲ್ಲಿಗೆ ಬಂದು ಒಂದು ವಾರ ಕಳೆಯುವಷ್ಟರಲ್ಲಿ ಶ್ರೀ ತುಲಸೀ ವಿವಾಹವಾಗುವದು. ಅದರ ಮರು ದಿನವೇ ಅಂದರೆ ಇಂದಿಗೆ ೧೫ ದಿನಗಳಿಗೇ ನಿನ್ನ ಕಲ್ಯಾಣಕಾರ್ಯವನ್ನು ತೀರಿಸಿ, ನಿನ್ನನ್ನು ಬೊಂಬೈಗೆ ಕಳಿಸುವೆವು. ನಿನ್ನ ಪರಿಣೀತ ವಧುವೂ ಹಾಗು ಆಕೆಯ ಕಡೆಯವರೆಲ್ಲರೂ ತಮ್ಮೂರಿಗೆ ತೆರಳಲಿ. ನಿನ್ನ ಖರ್ಚಿಗಾಗಿ ಈ ದಿನ ಈ ಪತ್ರದೊಂದಿಗೆ ೨೦೦ ರೂಪಾಯಿಗಳ ಚೆಕ್ಕು ಕಳಿಸಿದೆ. ನಾವು ಕಳಿಸಿರುವ ಚೆಕ್ಕಿನ ಬ್ಯಾಂಕು ಅಲ್ಲಿ ಸಮೀಪದಲ್ಲಿ ಇರದಿದ್ದರೆ, ಈ ಚೆಕ್ಕನ್ನೇ ಆ ಮನೆಯವಂಗೆ ಕೊಟ್ಟು ಅವರಿಂದ ೨೦೦ರೂಪಾಯಿ ಇಲ್ಲವೆ ನಿನ್ನ ರೈಲಖರ್ಚಿಗೆ ಬೇಕಾಗಬಹುದಾದ ನೂರು-ನೂರಿಪ್ಪತ್ತು ರೂಪಾಯಿಗಳನ್ನು ಪಡಕೊಂಡು ಹೊರಟು ಬಾ. ರೈಲಿನಲ್ಲಿ ಗಲಾಟೆ ಹೆಚ್ಚು. ಅದಕ್ಕಾಗಿ ಒಂದು ಸೆಕಂಡ ಕ್ಲಾಸಿನ ಕ್ಯಾರೇಜನ್ನೇ ರಿಝರ್ವ ಮಾಡಿಸಿಕೋ. ಬೇಗನೆ ಬಾ. ಮಿಕ್ಕ ಸಂಗತಿಗಳ ಬಗ್ಗೆ ಮುಖ್ತಾ ಏರ್ಪಾಟು ಮಾಡುವಾ.''

ಈ ಪತ್ರವನ್ನು ಶಿತಿಕಂಠನು ತುಸ ಗಂಟು ಮೋರೆಯಿಂದಲೇ ತನ್ನ ಪರಿಣೀತ ವಧುವಿಗೆ ತೋರಿಸಿದನು. ಅದನ್ನು ಕಂಡು ಅವಳ ಮುಖವು ಇಷ್ಟಗಲವಾಯಿತು. ಕೂಡಲೆ ಅವಳು ಆ ಸಂಗತಿಯನ್ನು ತನ್ನ ಅಕ್ಕ-ಅಮ್ಮ ಮೊದಲಾದವರಿಗೆ ಸಂಕ್ಷೇಪವಾಗಿ ಅರುಹಿದಳು. ಅವರೂ ಹಿರಿ-ಹಿರಿ ಹಿಗ್ಗಿ ಶಿತಿಕಂಠನನ್ನು ವಿಚಾರಿಸಿದರು. ಶಿತಿಕಂಠನು ತುಸ ಯೋಚನೆ ಮಾಡುವನಂತೆ ನಟಿಸುತ್ತ ಆ ಪತ್ರದ ಸಂಗತಿಯನ್ನು ಉಪ್ಪು-ಕಾರ ಹಚ್ಚಿ ಹೇಳಿದನು. ಅದನ್ನು ಕೇಳಿ ಮನೆಯ ಹಿರಿಯಳು ಅತಿ ಆತುರಳಾದಳು. ತನ್ನ ಮಗಳ ಲಗ್ನವು ಇವನೊಡನೆ ಯಾವಾಗಾದೀತೋ ಎಂದು ಹವಣಿಸಹತ್ತಿದಳು. ಆಕೆಯ ಮನಸ್ಸಿನಲ್ಲಿ ಮರುದಿನವೇ ಅಲ್ಲಿಂದ ಹೊರಡುವದಿತ್ತು; ಆದರೆ ೧-೨ ದಿನಗಳಲ್ಲೇ ದೀವಳಿಗೆಯ ಹಬ್ಬ ಬಂದಿದ್ದು, ಅದನ್ನು ಮಾಡದೆ ಮಂಗಲಕಾರ್ಯಕ್ಕಾಗಿ ಊರ ಬಿಡುವದು ಅವಳ ಭಾವನಾಮಯ ಮನಸ್ಸಿಗೆ ಒಪ್ಪಲಿಲ್ಲ. ಆದರಿಂದ ದೀವಳಿಗೆ ತೀರಿಸಿಕೊಂಡು ಕಡೆಪಂಚಮಿಯ ರಾತ್ರಿಯೇ ಹೊರಡುವದೆಂದು ಅವಳು ನಿರ್ಧರಿಸಿದಳು. ಅದನ್ನು ಕೇಳಿ ಇಷ್ಟು ವಿಲಂಬವು ತಕ್ಕದ್ದಲ್ಲವೆಂದು ಶಿತಿಕಂಠನು ಗುಂಯಿಗುಟ್ಟಿದನೇ ಹೊರತು, ನಾಳೆಯೇ ಹೊರಡಿರೆಂದು ಒತ್ತಾಯಪಡಲಿಲ್ಲ. ತಮ್ಮ ಮಗಳ

ಲಗ್ನವು ನಿಶ್ಚಿತವಾಯಿತೆಂದು ಮರುದಿನ ಬೆಳಗಿನಿಂದಲೇ ಆ ಮನೆಯ ಹಿರಿಯಳೂ, ಅವಳ ಮಕ್ಕಳೂ ಕಂಡ ಕಂಡವರ ಮನೆಗೆ ಅಂಡಲೆದು ಸಾರಿಕೊಳ್ಳಹತ್ತಿದರು.

ಯಥಾಪ್ರಕಾರವಾಗಿ ದೀವಳಿಗೆ ಹಬ್ಬವು ಬಂತು; ಆ ಮನೆಯವರ ಜೆಲ್ಲಾಟಕ್ಕೆ ಮಿತಿಯೇ ಉಳಿಯಲಿಲ್ಲ; ನರಕಚತುರ್ದಶಿಯ ಆರುತಿ-ಅಕ್ಷತೆಗಳೂ ಅಭ್ಯಂಗಾದಿ ಸ್ನಾನಗಳೂ ಒಳ್ಳೇ ವಿಜೃಂಭಣೆಯಿಂದ ನೆರವೇರಿದವು. ಮಿಷ್ಟಾನ್ನದ ಊಟ-ಉಪಚಾರಗಳೂ ಸಾಗಿದವು. ಸಂಜೆಯು ಪಗಡೆಯ ಆಟಕ್ಕೆ ಪ್ರಾರಂಭವಾಯಿತು. ಪಾಂಡವ-ಕೌರವರ ಸ್ಮಾರಕದ ಆ ಲೆತ್ತದ ಆಟವು ಆ ಮನೆಯಲ್ಲಿ ಒಳ್ಳೇ ರಭಸದಿಂದ ಸಾಗಿತು. ಪಾಂಡವ-ಕೌರವರು ಲೆತ್ತದಲ್ಲಿ ಸೋತವರು ತಮ್ಮ ರಾಜ್ಯ, ಲಕ್ಷ್ಮೀ ಕಡೆಗೆ ದ್ರೌಪದಿಯನ್ನು ಕೂಡ ಪಣ ಹಚ್ಚಿದಂತೆ, ಆ ಮನೆಯವರು ತಮ್ಮಲ್ಲಿರದ ರಾಜ್ಯ-ಲಕ್ಷ್ಮಿಗಳನ್ನು ಪಣಕೊಡದಿದ್ದರೂ, ಹೇಳಲಿಕ್ಕೆ ಕೂಡ ಅಸಹ್ಯವಾದ-ಆ ಉಪವರ ವಧುವಿನ-ಪಣ ತೊಟ್ಟರು; ಪಗಡಿಯಾಡುವವರಲ್ಲಿ ಶಿತಿಕಂಠನೊಬ್ಬನೇ ಗಂಡಸು. ಹೀಗಾಗಿ ಪ್ರತಿಸಲವೂ ಅವನೇ ಆಕೆಯನ್ನು ಗೆದೆಯಬೇಕು. ಲೆತ್ತದಲ್ಲಿ ಗೆದ್ದ ತಮ್ಮ ಭ್ರಾತೃಪತ್ನಿಯನ್ನು ಕೌರವಾದಿಗಳು ಸಭಾಗೃಹದಲ್ಲೇ ಸೀರೆಸೆಳೆದು ಅವಮಾನ ಮಾಡಿರುವಾಗ, ತನ್ನ ಭಾವೀ ಪರಿಣತ ವಧುವಿನಲ್ಲೂ, ಅವಳ ಅಕ್ಕ-ತಂಗಿ ಮುಂತಾದವರಲ್ಲೂ ನಮ್ಮ ಶಿತಿಕಂಠನು ಆ ಪ್ರಯೋಗವನ್ನು ಸಹಜವಾಗಿ ಮಾಡುತ್ತಿದ್ದನು!!

ಈ ವರೆಗೆ ವರ್ಣಿಸಿದ ಶಿತಿಕಂಠನ ಹಾಗು ಆ ಮನೆಯ ಹೆಂಗಳೆಯರ ವರ್ತನವು ನಮ್ಮೂರ ಕೆಲ ಚಾಣಾಕ್ಷರಿಗೆ ಅಸಹ್ಯವೆನಿಸಿತು. ಇವನು ಠಕ್ಕನಿದ್ದು, ಇವನೇನೋ ಮೋಸ ಮಾಡಿ ಇವರನ್ನೆಲ್ಲ ಹಾಳುಮಾಡುವನೆಂದು ಅವರ ದೃಢ ನಂಬಿಕೆಯಾಗಿತ್ತು. ಅದರಿಂದ ಶಿತಿಕಂಠನ್ಯಾರು, ಎಲ್ಲಿಯವನು; ಈತನ ಪೂರ್ಣ ವೃತ್ತಾಂತವೇನು? ಮುಂತಾದವುಗಳ ಬಗ್ಗೆ ಅವರು ಬಗೆಬಗೆಯಾಗಿ ಶೋಧಿಸಹತ್ತಿದರು. ಆ ಚಾಣಾಕ್ಷರು ಶಿತಿಕಂಠನನ್ನು ಮನಃಪೂರ್ವಕವಾಗಿ ತಿರಸ್ಕರಿಸುತ್ತಿದ್ದರು; ಆದರೆ ಅವನ ಮಟ್ಟನ್ನು ತಿಳಿದು, ಅವನ ಕಪಟನಾಟಕವನ್ನು ಬೈಲಿಗೆಳೆಯುವದಕ್ಕಾಗಿ ಅವರು ಅವನೊಡನೆ ಒಳ್ಳೇ ಸ್ನೇಹದಿಂದ ವರ್ತಿಸುತ್ತಿದ್ದರು. ಹೀಗೆ ಅವರು ೧-೧|| ತಿಂಗಳು ಪ್ರಯತ್ನಿಸಿದ ಬಳಿಕ ಅವರಿಗೆ ಶಿತಿಕಂಠನ ಸ್ವಭಾವ ಪರಿಚಯವು ಅಲ್ಪ ಸ್ವಲ್ಪಾಗಿ ಆಗಹತ್ತಿತು.

ಕಾರ್ತಿಕ ಶುದ್ಧ ಪ್ರತಿಪದೆಯು ದೀಪಾವಳಿಯ (ಮನ್ವಾದಿ) ಹಬ್ಬದ ಮುಖ್ಯ ದಿವಸ. ಆ ಚಾಣಾಕ್ಷರ ಹೆಸರಿಗೆ ಅಂದು ಒಂದು ಮಹತ್ವದ ಪತ್ರ ಬಂದಿತು. ಅದು ದಕ್ಷಿಣದೇಶದೊಳಗಿನ ಯಾವುದೋ ಒಂದು ಧರ್ಮಾಧಿಕಾರಿ ಮುಠದ್ದಾಗಿತ್ತು. ಅದರೊಳಗಿನ ಸಂಗತಿಗಳಿಂದ ಶಿತಿಕಂಠನು ಪೂರಾ ಠಕ್ಕ

ನೆಂಬದು ನಮ್ಮವರ ನಿದರ್ಶನಕ್ಕೆ ಬಂದಿತು.

“ಶಿತಿಕಂಠನು ಕಳ್ಳನೂ, ಸುಳ್ಳನೂ, ಮಹಾ ವ್ಯಭಿಚಾರಿಯೂ, ಕುಲಗೇಡಿಯೂ ಆಗಿದ್ದು, ಅವನು ತಮಿಳನಾಡಿನವನು; ಅವನು ಈ ಮಠದಲ್ಲಿ ಇಂತಿಷ್ಟು ಬೆಲೆಯ ವಸ್ತ್ರ-ಒಡವೆಗಳನ್ನು ಎತ್ತಿ ಹಾಕಿರುವನಲ್ಲದೆ, ಮತ್ತೆ ಕೆಲವು ಅನನ್ವಿತ ಕೃತ್ಯಗಳನ್ನು ಮಾಡಿರುವನು. ಅವನು ಈಗ ನಿಮ್ಮಲ್ಲಿ ಇಂಥವರಲ್ಲಿರುವನೆಂಬದು ನೀವು ನಮ್ಮಲ್ಲಿಯ ಇಂಥವರಿಗೆ ಬರೆದ ಪತ್ರದಿಂದ ತಿಳಿಯಬಂತು. ನೀವು ಬರೆದ ಮುಖಚರ್ಯೆಯ ಮನುಷ್ಯನು ನಾವು ಅಕ್ಷಪಣೆಪಡುವ ಶಿತಿಕಂಠನೇ ಆಗಿರಬೇಕು. ಆದ್ದರಿಂದ ನೀವು ಈ ಪತ್ರವನ್ನು ನಿಮ್ಮಲ್ಲಿಯ ಪೋಲೀಸ ಅಮಲ್ದಾರರಿಗೆ ತೋರಿಸಿ, ಅವನನ್ನು ಕೂಡಲೆ ಅರೆಸ್ಟ ಮಾಡಿಸಿ; ಹಾಗು ನಮ್ಮ ಮಠಕ್ಕೊಂದು ವಾಯರು ಕೊಡಿರಿ. ನಾವು ನಮ್ಮಲ್ಲಿಯ ಜವಾಬ್ದಾರ ಅಧಿಕಾರಿಯನ್ನು ನಿಮ್ಮಲ್ಲಿಗೆ ಕಳುಹಿಸಿ, ಅವನ ವಿರುದ್ಧ ಕೇಸು ನಡಿಸುವೆವು. ಈ ಬಗ್ಗೆ ನಿಮಗೆ ವಿಶೇಷ ಬರೆಯಬೇಕಾಗಿಲ್ಲ. ನೀವೆಲ್ಲ ಈ ಮಠದ ತುಂಬಾ ಅಭಿಮಾನಿಗಳೇ ಇರುತ್ತೀರಿ” ಎಂದು ಆ ಮಠದ ಪತ್ರದ ಸಂಗತಿಯಾಗಿದ್ದು, ಅದರ ಕೆಳಗೆ ಆ ಮಠದ ಶಿಕ್ಕಾ-ಮೊಹರುಗಳೂ, ದಿವಾಣರ ಹಸ್ತಾಕ್ಷರಗಳೂ ಇದ್ದವು; ಹಾಗು ಆ ಪತ್ರದೊಂದಿಗೆ ನಮ್ಮಲ್ಲಿಯ ಪೋಲೀಸ ಅಮಲದಾರರಿಗೂ ಅದೇ ಸಂಗತಿಯ ಸಂಕ್ಷಿಪ್ತ ಪತ್ರವಿದ್ದು, ಇಂತಿಂಥ ಮುಖಚರ್ಯೆಯ ಮನುಷ್ಯನು ಅಲ್ಲಿ ಇದ್ದರೆ ಅವನನ್ನು ಕೂಡಲೆ ದಸ್ತಗೀರು ಮಾಡಿ, ತಂತಿಕೊಡಿರೆಂದು ಅಪ್ಪಣೆಯಿದ್ದಿತು

ಆ ಪತ್ರವು ಕೈ ಸೇರಿದೊಡನೆ ನಮ್ಮೂರ ಚಾಣಾಕ್ಷರು ಅರ್ಧ ಕೆಲಸ ಮಾಯಿತೆಂದರು. ಆಗ ಅವರು ಆ ಸಂಗತಿಯನ್ನು ಯಾರಿಗೂ ತಿಳಿಸದೆ, ದಕ್ಷಿಣ ದೇಶದ ಒಂದು ದೊಡ್ಡ ಪಟ್ಟಣಕ್ಕೆ ಯಾರ ಹೆಸರಿಗೋ ಒಂದು ಅರ್ಜಂಟ ತಂತಿ ಕೊಟ್ಟರು. ಅವರ ನಿರೀಕ್ಷಣೆಯ ಮೇರೆಗೆ ಆ ಮನುಷ್ಯನು ಮರುದಿನ ಬೆಳಗ್ಗೆ ನಮ್ಮೂರ ಆ ಮನೆಗೆ ಬಂದನು. ತನಗೆ ಶಿತಿಕಂಠನೇ ತಂತಿಕೊಟ್ಟಿರುತ್ತಾನೆಂದು ಅವನು ಇದುವರೆಗೂ ತಿಳಕೊಂಡಿದ್ದನು; ಆದರೆ ಇಲ್ಲಿಗೆ ಬಂದಕೂಡಲೆ ಅವನ ಭ್ರಮ ನಿರಸನವಾಯಿತು. ಆ ತಮಿಳನು ಶಿತಿಕಂಠನನ್ನು ಒತ್ತಟ್ಟಿಗೆ ಕರೆದು ಏನೇನೋ ಹೇಳಿದನು. ಅವರಿಬ್ಬರ ಗುಟ್ಟು ಒಂದಾಯ್ತು. ನಮ್ಮೂರ ಚಾಣಾಕ್ಷರಿಗೆ ತಾವು ತಂತಿಕೊಟ್ಟ ಮನುಷ್ಯನು ಬಂದನೋ ಇಲ್ಲವೋ ತಿಳಿಯಲಿಲ್ಲ. ಯಾಕಂದರೆ ಅವರು ಆ ಪಟ್ಟಣದ ಒಬ್ಬ ನಗರಶ್ರೇಷ್ಠನ ಹೆಸರಿಗೆ ತಂತಿ ಬರೆದು ಅವನನ್ನು ಬರಮಾಡಿಕೊಳ್ಳಲು ಪ್ರಯತ್ನಿಸಿದ್ದರು. ನಮ್ಮೂರ ಆ ಮನೆಗೆ ಬಂದವನು ಒಬ್ಬ ಸಾಮಾನ್ಯ ಮನುಷ್ಯನಾಗಿದ್ದನು. ಅದರಿಂದ ಅತ್ತ

ರಿಗೆ ನಿಜಸ್ಥಿತಿಯು ಜ್ಞಾನವಾಗಲಿಲ್ಲ; ಆದರೆ ಊರಿಂದ ಬಂದವನಿಗೂ ಶಿತಿಕಂಠನಿಗೂ ಆ ತಂತಿಯಿಂದ ಎಲ್ಲ ಸಂಗತಿಗಳು ತಿಳಿದುಹೋಗಿದ್ದವು. ಆ ದೊಡ್ಡ ಮನುಷ್ಯನು ಬರುತ್ತಲೆ, ತಾವು ಆ ಮಠದ ಪತ್ರದೊಂದಿಗೆ ಅವನನ್ನೂ ಶಿತಿಕಂಠನನ್ನೂ ಪೋಲೀಸರ ಬಲೆಯಲ್ಲಿ ಸೇರಿಸಬೇಕೆಂದು ನಮ್ಮೂರ ಚಾಣಾಕ್ಷರ ಹವಣಿಕೆಯಾಗಿದ್ದಿತು; ಆದರೆ ಶಿತಿಕಂಠನೂ ಅವನ ಸಹಾಯಕನೂ ಅಂತಿಂಥವರಲ್ಲ; ಅವರು ಇಂಥ ಎಷ್ಟೋ ಜನರನ್ನು ಹಾ ಹಾ ಅನ್ನುವಷ್ಟರಲ್ಲಿ ನುಂಗಿ ನೀರು ಕುಡಿದವರು!

ಕಾರ್ತಿಕ ಶುದ್ಧ ದ್ವಿತೀಯೆಯು ಕಳೆದು ತೃತೀಯೆಯ ದಿನ ಬೆಳಗಾಗ ಬಂತು; ಆದರೂ ಚಾಣಾಕ್ಷರು ತಂತಿಕೊಟ್ಟಿದ್ದ ಗೃಹಸ್ಥನ ಪತ್ತೆಯಿಲ್ಲ. ಬೆಳಗಾದ ಕೂಡಲೆ ಪೋಲೀಸರಿಗೆ ವರ್ದಿಕೊಟ್ಟು ಶಿತಿಕಂಠನನ್ನೊಬ್ಬನನ್ನಾದರೂ ಅವರ ವಶಕ್ಕೊಪ್ಪಿಸಬೇಕೆಂದು ಅವರು ನಸುಕಿನಲ್ಲಿಯೇ ನಮ್ಮೂರ ಆ ಮನೆಗೆ ಹೋದರು. ಮನೆಯವರನ್ನು ಶಿತಿಕಂಠನೆಲ್ಲೆಂದು ಕೇಳಿದರು. ಆ ಮನೆಯ ಹಿರಿಯಳು ಅವನು ಆ ಮಹಡಿಯ ಮೇಲೆ ಓದುತ್ತ ಕುಳಿತಿರಬೇಕೆಂದು ಅಂದಳು. ಅಲ್ಲಿ ನೋಡಿದರು; ಇರಲಿಲ್ಲ. ಅವನು ಆ ಪಕ್ಕದ ಕೋಣೆಯಲ್ಲಿ ಪವಡಿಸಿರಬೇಕೆಂದು ಇನ್ನೊಬ್ಬ ತರುಣಿಯು ನುಡಿದಳು. ಅಲ್ಲಿಯೂ ಇರಲಿಲ್ಲ. ಅಗೋ, ಆ ನಮ್ಮ ಅಕ್ಕಯ್ಯನ ಮಂಚದ ಮೇಲಿರಬಹುದು, ನೋಡಿರೆಂದು ಒಬ್ಬ ಕುಮಾರಿಯು ಅಂದಳು! ಅದೂ ವ್ಯರ್ಥವಾಯಿತು. ಬೇಗಿನ ಝಾವದಲ್ಲಿ ನಮ್ಮ ಚಿನ್ನಮ್ಮ(ಉಪವರ ವಧುವಿಗೆ)ಗೆ ಓದು ಹೇಳಿಕೊಡಲಿಕ್ಕೆ ಅವಳ ಕೊಠಡಿಗೆ ಹೋಗಿರಬಹುದೆಂದರು. ಅದೂ ಸುಳ್ಳಾಯಿತು. ಅಲ್ಲಿ ಇಲ್ಲಿ ಎಂದು ಎಲ್ಲರೂ ಶಿತಿಕಂಠನನ್ನು ಎಲ್ಲ ಕಡೆಯಲ್ಲಿ ಹುಡುಕಿದರು. ಎಲ್ಲಿಯೂ ಅವನ ಪತ್ತೆಯಾಗಲಿಲ್ಲ. ಕಡೆಗೆ ಅವನ ಅಪ್ಪನೆಂದು ನಿನ್ನೆ ಬಂದಿದ್ದ ಆ ಇನ್ನೊಬ್ಬ ಕೊಂಗನನ್ನು ಶೋಧಿಸತೊಡಗಿದರು. ಅವನ ಪತ್ತೆಯೂ ಹತ್ತಲಿಲ್ಲ. ಅವನಿಂದ ದಿನಾಲು ನಸುಕಿನಲ್ಲಿ ಓದು ಹೇಳಿಸಿಕೊಳ್ಳುತ್ತಿದ್ದ ಆ ಉಪವರ ವಧುವನ್ನಾದರೂ ಕಂಡು ಶಿತಿಕಂಠನೆಲ್ಲಿರುವನೆಂಬದನ್ನರಿಯುವದಕ್ಕಾಗಿ ಅವರು ಆ ಕುಮಾರಿಕೆಯನ್ನು ಹುಡುಕಲಾರಂಭಿಸಿದರು. ಅವಳು ಸಹ ಎಲ್ಲಿಯೂ ಕಾಣಿಸಲಿಲ್ಲ. ಈ ಘಟನಾ ವಿಚಿತ್ರವನ್ನು ಕಂಡು ನಮ್ಮೂರ ಚಾಣಾಕ್ಷರಿಗೆ ಬಹು ಆಶ್ಚರ್ಯವೆನಿಸಿತು! ಆ ಮನೆಯ ಹಿರಿಯಳೇ ಮೊದಲಾದ ಎಲ್ಲ ಹೆಂಗಳೆಯರು ಹಾಹಾರಿದರು! ಮನೆಯ ಯಜಮಾನನಿಗೆ ಆ ಸಂಗತಿಯು ತಿಳಿಯಲು, ಅವನು ತನ್ನ ಮನೆಯ ಹೆಂಗಸರಿಗೆ ಬಾಯಿಗೆ ಒಂದಂತೆ ಬಯ್ಯಲಾರಂಭಿಸಿದನು. ಆ ಮನೆಯ ಅಳಿಯನು-ಆ ಷಂಡಪುರುಷನು—ಹೊಃ, ಹೊಃ, ಎಂದು ನಕ್ಕು, ಹೀಗಾಗುವದೆಂದು ನಾನು ಮೊದಲಿಗೇ ಅಂದುಕೊಂಡಿದ್ದೆನೆಂದನು. ಒಟ್ಟಿಗೆ

ಅಂದಿನ ಆ ಅಕ್ಕನ ತದಿಗೆಯ ದಿನವು ನಮ್ಮೂರ ಚಾಣಾಕ್ಷರಿಗೂ, ಆ ಮನೆಯ ಹೆಂಗಸರಿಗೂ ಬಹು ಶೋಚನೀಯಸ್ಥಿತಿಯಲ್ಲಿ ಕಳೆಯಿತು.

## ೨ನೇ ಮೆಟ್ಟಿಲು.

ನಮ್ಮೂರ ಚಾಣಾಕ್ಷರು ಶಿತಿಕಂಠನನ್ನೂ, ಅವನ ಸಂಗಡಿಗ ಹಾಗೂ ಆ ಉಪವರಕನ್ನಿಕೆಯನ್ನೂ ನಾನಾ ಕಡೆಗೆ ಹುಡುಕಿಸಿದರು; ಪೋಲೀಸರಿಗೆ ಆ ಮೊದಲು ಬಂದಿದ್ದ ಮುಂಗಡ ಪತ್ರವನ್ನು ಕೊಟ್ಟು, ನಡೆದ ಸಂಗತಿಯನ್ನು ತಿಳಿಸಿದರು. ಪೋಲೀಸರು ಆ ಮನೆಯವರನ್ನು ಕಂಡು ಅವರ ಜವಾಬು ತಕ್ಕೊಂಡು, ಅವರೆಲ್ಲಿಗೂ ಹೋಗದಂತೆ ನೋಡಿಕೊಂಡು, ಶಿತಿಕಂಠಾದಿಗಳನ್ನು ಶೋಧಿಸುವ ಕೆಲಸಕ್ಕೆ ನಡೆದರು. ಅಂದಿನ ಆ ದೀವಳಿಗೆಯ ತದಿಗೆಯು ನಮ್ಮೂರವರಿಗೆ ಇದು ವರೆಗೂ ಚೆನ್ನಾಗಿ ನೆನಪಿರುತ್ತದೆ. ಪೋಲೀಸರು ಬಹಳ ಸಾಹಸ ಮಾಡಿದರೂ ಶಿತಿಕಂಠನದಾಗಲಿ, ಅವನ ಸಂಗಡಿಗನದಾಗಲಿ ಪತ್ತೆಯಾಗಲಿಲ್ಲ; ಆದರೆ ಆ ಉಪವರ ಕುಮಾರಿಯು ಮಾತ್ರ ಅವರಿಗೆ ಮುಂದೆ ಕೆಲದಿನಗಳ ತರುವಾಯ, ಒಂದೂರಲ್ಲಿ ಒಬ್ಬ ಝಟಕಾಸಾಹೇಬನ ಮನೆಯಲ್ಲಿ ಸೆರೆಯಾಳಾಗಿರುವಳೆಂದು ತಿಳಿಯಿತು. ಕೂಡಲೆ ಪೋಲೀಸರ ದಂಡು ಆ ಬಡ ಝಟಕಾದವನ ಮನೆಯನ್ನು ಮುತ್ತಿ ಅವಳನ್ನು ಕರೆತಂದರು. ಪೋಲೀಸರ ಉಪಟಳ ನಡೆದಾಗ ಆ ಝಟಕಾದವನು ಮನೆಯಲ್ಲಿರಲಿಲ್ಲ. ತನ್ನ ಝಟಕಾಬಂಡಿಯೊಡನೆ ಅವನು ರೈಲಸ್ಟೇಶನ್ನಿಗೆ ಹೋಗಿದ್ದನು. ಅವನಿಗೆ ಅಲ್ಲಿಯೇ ಆ ಸುದ್ದಿಯು ಹತ್ತಲು, ಅವನು ತನ್ನ ಝಟಕಾಬಂಡಿ-ಕುದುರೆಗಳನ್ನು ಅಲ್ಲಿಯೇ ಒತ್ತಟ್ಟಿಗೆ ಚರಂಡಿಯ ಬಳಿಯಲ್ಲಿ ನಿಲ್ಲಿಸಿ, ಎತ್ತೋ ಪಲಾಯನಸೂಕ್ತ ಹೇಳಿಸಿದನು. ಎಷ್ಟು ಪ್ರಯತ್ನಿಸಿದರೂ ಪೋಲೀಸರಿಗೆ ಅವನ ಪತ್ತೆಯೂ ಹತ್ತಲಿಲ್ಲ.

ನಮ್ಮೂರ ಆ ಮನೆಯ ಕುಮಾರಿಯು ಅಂದೇ ತಮ್ಮ ಮನೆಗೆ ಬಂದಳು. ನಾಲ್ಕೆಂಟು ದಿನಗಳಲ್ಲಿಯೇ ಅವಳು ಸೊರಗಿ ಸೊರಗಿ ಸಾಯಲಾಗಿದ್ದಳು. ಪೋಲೀಸರು ಆಕೆಯ ಜವಾಬನ್ನು ತೆಗೆದುಕೊಳ್ಳಲು ಅವಳು ಈ ತೆರವಾಗಿ ಹೇಳಿದಳು:--

ನಮ್ಮ ಮನೆಗೆ ಬಂದಿದ್ದ ಆ ಶಿತಿಕಂಠನ ರೂಪ, ಭಾಷಣ ಮುಂತಾದವುಗಳು ಒಳ್ಳೇ ಮನೋಹರವಾಗಿದ್ದುದರಿಂದ, ನಾನು ಅವನನ್ನು ನೋಡಿದಾಗಿನಿಂದಲೂ ಅವನ ವಿಷಯವಾಗಿ ಮನಸೋತಿದ್ದೆನು. ಅವನಾದರೂ ನನ್ನನ್ನು ಮೋಹಿಸಿದ್ದನು. ನನ್ನನ್ನು ಲಗ್ನವಾಗುವ ತನ್ನ ಬೇತನ್ನು ನನಗವನು ತಿಳಿಸಿ ೧-೧॥ ತಿಂಗಳಾಯಿತು. ನಮ್ಮ ಅಮ್ಮನು ಮೊದಮೊದಲು ನಮ್ಮನ್ನು ಏಕಾಂತ

ದಲ್ಲಿರಗೊಡುತ್ತಿದ್ದಿಲ್ಲ; ಆದರೆ ಆತನ ಮಿಷ್ಟಭಾಷಣ, ವಿನಯದ ಸ್ವಭಾವ, ದೊಡ್ಡಸ್ತಿಕೆಯ ಲಕ್ಷಣ ಇವುಗಳನ್ನು ಕಂಡು, ಬರಬರುತ್ತ ಅವಳು ತನ್ನ ಬಿಗುವನ್ನು ಸಡಲಿಸಿದಳು. ನಾವು ಹಗಲೂ-ರಾತ್ರಿ ಒತ್ತಟ್ಟಿಗಿದ್ದು, ಓದು-ಬರಹ, ಗಾಯನ-ವಾದನ ಮುಂತಾದವುಗಳಲ್ಲಿ ಕಾಲಯಾಪನೆ ಮಾಡುತ್ತಿದ್ದೆವು. ಲಗ್ನದ ವಿಷಯದ ಅವನ ಪತ್ರಗಳು ಎಲ್ಲಿಂದ ಬರುತ್ತಿದ್ದವೆಂಬದು ಖಂಡಿತವಾಗಿ ಹೇಳಲಿಕ್ಕಾಗದಿದ್ದರೂ, ಆ ಝುಟಕಾಸಾಹೇಬನಿದ್ದ ಆ+ + + + ಊರ ಪೋಷ್ಟಿನ ಮುದ್ರೆಗಳೇ ಅದರ ಮೇಲಿರುತ್ತಿದ್ದವೆಂಬದು ಈಗ ನನಗೆ ತಿಳಿದದೆ. ನಮ್ಮ ಅಮ್ಮನು ಶಿತಿಕಂಠನಿಂದ ನಮ್ಮ ಅಪ್ಪೇಕ್ಷರಿಗೆ ನನ್ನ ವಿವಾಹದ ಬಗ್ಗೆ ಬರೆಸಿದ್ದ ಪತ್ರಗಳೆಲ್ಲ ಆ ಸಾಹೇಬನಲ್ಲಿರುವವೆಂಬದನ್ನು ನಾನು ಮೊನ್ನೆ ಅವನು ಮನೆಯಲ್ಲಿರದಾಗ ನೋಡಿ ಮನಗಂಡಿರುವೆನು.

ಆ ಸಾಹೇಬನು ನಿಜವಾಗಿ ಮುಹಮ್ಮದೀಯನಾಗಿ ಕಾಣುವದಿಲ್ಲ ಅವನ ಮಾತೃಭಾಷೆಯು ಶಿತಿಕಂಠನಂತೆ ಅರವು ಆಗಿರಬಹುದಾಗಿದೆ. ನಾನು ಆ ದಿನ ನಮ್ಮ ಮನೆಯಲ್ಲಿ ನನ್ನ ಕೋಣೆಯಲ್ಲಿ ಮಲಗಿರುವಾಗ, ಮಧ್ಯರಾತ್ರಿಯಲ್ಲಿ ಅವರೀರ್ವರೂ ಕತ್ತಲಲ್ಲಿಯೇ ಅಲ್ಲಿಗೆ ಬಂದು, ಎಲ್ಲಕ್ಕೂ ಮೊದಲು ನನ್ನ ಬಾಯಿಗೆ ಅರಿವೆ ತುರುಕಿದರು. ಬಳಿಕ ನನ್ನ ಪೆಟ್ಟಿಗೆ-ನಮ್ಮಮ್ಮನ ಪೆಟ್ಟಿಗೆ ಮುಂತಾದವುಗಳಲ್ಲಿಯ ವಸ್ತ್ರ-ಒಡವೆಗಳನ್ನು ತಕ್ಕೊಂಡರು. ಇತ್ತೀಚೆಗೆ ನಮ್ಮ ಮನೆಯ ಎಲ್ಲ ಬೀಗದ ಕೈಗಳು ಶಿತಿಕಂಠನಲ್ಲೇ ಇರುತ್ತಿದ್ದವು. ನಂತರ ಅವರು ನನ್ನನ್ನು ಎತ್ತಿಕೊಂಡೊಯ್ದು, ನಮ್ಮ ಹಿತ್ತಲಬಾಗಿಲ ಬಳಿಯಲ್ಲಿ ನಿಂತಿದ್ದ ಒಂದು ಝುಟಕಾ ಬಂಡಿಯಲ್ಲಿ ಹಾಕಿದರು. ನಾನು ಆಗ ಸಾಹಸ ಮಾಡಿದ್ದರೆ ಒದರಿ-ಚೀರಿ, ಮತ್ತಾವ ಉಪಾಯದಿಂದಾದರೂ ಮನೆಯವರನ್ನಾಗಲಿ, ಹೆರವರನ್ನಾಗಲಿ ಎಚ್ಚರಿಸಬಹುದಾಗಿತ್ತು; ಆದರೆ ನನ್ನ ಪ್ರೀತಿಯ-ನನ್ನ ಪ್ರೇಮಕ್ಕೆ ಪಾತ್ರನಾದ ಆ ಶಿತಿಕಂಠನಿಗೆ ಹೆರವರಿಂದ ಅತ್ಯಾಚಾರ ಮಾಡಿಸಬಾರದೆಂದು ನನ್ನ ಮನಸ್ಸು ನನಗೆ ಒತ್ತಿ ಒತ್ತಿ ಹೇಳುತ್ತಿತ್ತು. ಬಳಿಕ ತುಸ ಹೊತ್ತಿನಲ್ಲಿಯೇ ಅವರು ಆ ಝುಟಕಾಬಂಡಿಯ ಸುತ್ತಲು ಪರದೆ ಕಟ್ಟಿದರು; ಶಿತಿಕಂಠನು ಝುಟಕಾದೊಳಗೆ ಕುಳಿತನು. ಆ ಇನ್ನೊಬ್ಬನು ತನ್ನ ಬಳಿಯಲ್ಲಿದ್ದ ಗಡ್ಡ-ಮೀಸೆ-ಚೆಣ್ಣ-ಜಡಾವು ಮುಂತಾದ ಝುಟಕಾದವನ ವೇಷಧರಿಸಿ ಆ ಬಂಡಿಯನ್ನು ವೇಗದಿಂದ ಬಿಟ್ಟನು. ನಮ್ಮೂರಿಂದ ಅದು ಯಾವ ದಿಕ್ಕಿಗೆ ನಡೆಯಿತೆಂಬದು ನನಗೆ ತಿಳಿಯದಾಯಿತು. ಮುಂದೆ ಅದು ಯಾವುದೋ ಒಂದು ಊರ ಹತ್ತರ ನಡೆದಾಗ ಒಬ್ಬ ಪೋಲೀಸಿನವನು ನಮ್ಮ ಬಂಡಿಯನ್ನು ತರುಬಿ:—ಇಷ್ಟ ರಾತ್ರಿಯಲ್ಲಿ ಎಲ್ಲಿಗೆ ನಡೆದಿರುವಿ? ಎಂದು ಝುಟಕಾದವನಿಗೆ ಗದ್ದರಿಸಿ ಕೇಳಲು, ಅವನು ಹಿಂದುಸ್ತಾನೀ ಭಾಷೆ

ಯಿಂದ:—"ನಮ್ಮ ಸಾವುಕಾರರ ಫೋಟಾದವರನ್ನು ನಾಳೆ ಬೆಳಿಗ್ಗೆ ಇಂಥ ಊರಿಗೆ ಒಯ್ದು ತಲುಪಿಸಬೇಕಾಗಿದೆ. ಅಲ್ಲಿ ನಮ್ಮ ಸಾವುಕಾರರು ಆಸ್ವಸ್ಥ ಯಲ್ಲಿರುತ್ತಾರೆ ಇತ್ಯಾದಿ" ಏನೇನೋ ಹೇಳಿ, ಆ ಪೋಲೀಸನಿಗೆ ೧-೨ ಚುಟ್ಟಿಗಳನ್ನು ಕೊಟ್ಟು ಅವನನ್ನು ರಾಜಿಮಾಡಿಕೊಂಡು ಮತ್ತೆ ಬಂಡಿಯನ್ನು ವೇಗವಾಗಿ ಸಾಗಿಸಿದನು. ಅಂದು ಬೆಳಗಾಗುವಷ್ಟರಲ್ಲಿ ನಾವು ಏನಿಲ್ಲೆಂದರೂ ೩೦-೪೦ ಮೈಲು ದಾರಿ ಸಾಗಿರಬಹುದು. ಝಟಕಾಬಂಡಿಯು ನಡೆದಾಗ ನಡುನಡುವೆ ಅವರೀರ್ವರೂ ಏನೇನೋ ತಮ್ಮ ಮಾಕ್ಸ-ಅರವು-ಭಾಷೆಯಲ್ಲಿ ಕಿವಿಕಚ್ಚಾಡುತ್ತಿದ್ದರು. ಇನ್ನೂ ನಸುಕಿರುತ್ತಲೇ ಅವರು ನನ್ನನ್ನು-ನಾನು ನಿಮಗೆ ದೊರೆತ-ಆ ಮನೆಯಲ್ಲಿಳಿಸಿ ನನ್ನ ಬಾಯು ಅರಿವೆ ತೆಗೆದರು. ನಾನು ಆಗ ಅಳಲಾರಂಭಿಸಿದೆನು. ಆ ಕೂಡಲೆ ನನ್ನ ಆ ಪ್ರಿಯಕರ ಶಿತಿಕಂಠನು ನನ್ನ ಗಲ್ಲ ಹಿಡಿದು ನನ್ನನ್ನು ಸಮಾಧಾನಪಡಿಸಿ:—"ನೀನು ಅಂಜಬೇಡ; ಇವರು ನನ್ನ ಆಪ್ತರು. ನಿಮ್ಮೂರ ಕುಟಾಳಜನರು ಇಲ್ಲದ-ಸಲ್ಲದ ಆರೋಪ ಹೊರಿಸಿ ನನ್ನ ನಿನ್ನ ಲಗ್ನ ಸಂಬಂಧವನ್ನು ತಪ್ಪಿಸಲು ಪ್ರಯತ್ನಿಸಿದುದರಿಂದ, ನಾನೀ ಒಗೆಯಾಗಿ ನಿನ್ನನ್ನು ಹರಣ ಮಾಡಬೇಕಾಯಿತು. ನಾನು ಇಂದೇ ನಮ್ಮೂರಿಗೆ ಹೋಗಿ, ಹಣಕಾಸು ತಂದು ನಿಮ್ಮ ತಾಯಿ ಮುಂತಾದವರೊಡನೆ ನಿನ್ನನ್ನು ನಮ್ಮೂರಿಗೆ ಕರೆದೊಯ್ದು ಲಗ್ನವಾಗುವೆನು. ಇನ್ನೆರಡು ದಿನಗಳಲ್ಲೇ ಖಂಡಿತವಾಗಿ ಬರುವೆನು. ಆ ವರೆಗೆ ನೀನು ಇಲ್ಲಿಯೇ ಸುಖವಾಗಿರು; ಆದರೆ ಇಲ್ಲಿಂದ ತಪ್ಪಿಸಿಕೊಂಡು ಹೋಗುವ ಯತ್ನ ಮಾಡಿದೆಯಾದರೆ ಮಾತ್ರ ಆ ನಿಮ್ಮೂರ, ನಿಮಗಾಗದವರ ಕೈಗೆ ಸಿಕ್ಕು ಜೀವಕ್ಕೆ ಕೂಡ ಎರವಾದಿಯೆ! ಜೋಕೆ" ಎಂದು ಹೇಳಿ, ನಮ್ಮ ಮನೆಯಿಂದ ತಂದಿದ್ದ ಎಲ್ಲ ವಸ್ತ್ರ-ಒಡವೆಗಳನ್ನೂ, ಬೆಲೆಯುಳ್ಳ ಅರಿವೆ-ಅಂಚಡಿಗಳನ್ನೂ ಒಂದು ಟ್ರಂಕಿನಲ್ಲಿ ತುಂಬಿ ಅದನ್ನು ಆ ಝಟಕಾಬಂಡಿಯಲ್ಲಿರಿಸಿ ಅವರೀರ್ವರೂ ಎಲ್ಲಿಗೋ ಹೋದರು. ಹೋಗುವಾಗ ಅವರು ತಮ್ಮ ತಲೆಬಾಗಿಲಿಗೆ ಭದ್ರವಾದ ಕೀಲಿ ಹಾಕಲಿಕ್ಕೆ ಮರೆತಿರಲಿಲ್ಲ.

ಅಂದು ಸಂಜೆಯು ನಾಲ್ಕುಗಂಟೆಗೆ ಆ ಸಾಹೇಬ ವೇಷಧಾರಿಯು ಮರಳಿ ಬಂದನು. ಅವನು ನನ್ನ ಊಟದ ವ್ಯವಸ್ಥೆಗಾಗಿ ಕೆಲ ಅಕ್ಕಿ ಮುಂತಾದ ಸಾಮಗ್ರಿಯನ್ನು ಸಂಗಡ ತಂದಿದ್ದನು. ಸಂಜೆಯು ಒಳಗೆ ನಾನು ಹೇಗಾದರೂ ಮಾಡಿ ಅಟ್ಟು ಉಂಡೆನು. ಮಿಕ್ಕ ಅಡಿಗೆಯನ್ನೂ ಆತನು ತೀರಿಸಿ ಎಲ್ಲ ವ್ಯವಸ್ಥೆ ಮಾಡಿದನು. ದೀಪ ಹಚ್ಚಿದ ಬಳಿಕ ಒಬ್ಬ ತುರುಕರ ಸುರೂಪ ತರುಣನು ಅಲ್ಲಿಗೆ ಬಂದನು. ಅವನು ಬರುತ್ತಲೇ ಆ ಝಟಕಾ ಸಾಹೇಬನು ಅವನನ್ನು ಸತ್ಕಾರದಿಂದ ಬರಮಾಡಿಕೊಂಡು ಆಸನದ ಮೇಲೆ ಕುಳ್ಳಿರಿಸಿದನು. ನಂತರ ಆ

ಬಂದ ತರುಣನು ನನ್ನ ಕಡೆಗೆ ಎವೆಯಿಕ್ಕದೆ, ನೋಡಲಾರಂಭಿಸಿದನು. ಆ ಝುಟಕಾ ಸಾಹೇಬನು ಅವನಿಗೇನೇನೋ ಉರ್ದೂಭಾಷೆಯಲ್ಲಿ ಹೇಳಿದನು. ನನಗದರ ಅರ್ಥವು ತಿಳಿಯದಿದ್ದರೂ ಮರ್ಮವು ಮಾತ್ರ ತಿಳಿಯದುಳಿಯಲಿಲ್ಲ. "ಇವಳು ನನ್ನ ಹೆಂಡತಿಯ ತಂಗಿ; ಇವರು ಬಡವರು; ಸುರೂಪಳಾಗಿರುವಂತೆ ಇವಳು ಸುಶೀಲೆಯೂ ಆಗಿರುವಳು. ನಾನು ನಿಮಗೆ ಮೊನ್ನೆ ಹೇಳಿದ ಹೆಣ್ಣು ಇವಳೇ. ನನ್ನ ಹೆಂಡತಿಯು ಹಡೆಯಲಿಕ್ಕಾಗಿ ತವರುಮನೆಗೆ ಹೋಗಿರುವಳು. ಅವಳು ಬರಲಿಕ್ಕೆ ಇನ್ನೂ ತುಸ ತಡವಾದುದರಿಂದ ನಿನ್ನೆ ನಾನೇ ಹೋಗಿ ಇವಳನ್ನು ನಿಮಗೆ ತೋರಿಸುವದಕ್ಕಾಗಿ ಕರೆತಂದಿರುತ್ತೇನೆ. ನೀವು ಇವಳನ್ನು ವರಿಸಬಯಿಸುವದಾದರೆ, ಮೊನ್ನೆ ನಾನು ಹೇಳಿದಂತೆ ನನಗೆ ೫ ಸಾವಿರ ರೂಪಾಯಿಗಳನ್ನು ಕೊಡಬೇಕಾಗುತ್ತದೆ. ನೀವು ಒಪ್ಪದಿದ್ದರೆ ನಾನಿವಳನ್ನು ಬೇರೆ ಕಡೆಗೆ ೬ ಸಾವಿರಕ್ಕೆ ಗೊತ್ತುಮಾಡುವವನಿದ್ದೇನೆ. ಇವಳಂತಹ ಸುಂದರ ತರುಣಿಯು ನಿಮಗೆ ಎಲ್ಲಿಯೂ ದೊರೆಯಲಿಕ್ಕಿಲ್ಲೆಂಬದನ್ನಷ್ಟು ಮಾತ್ರ ನೆನಪಿನಲ್ಲಿಡಿರಿ. ಇತ್ಯಾದಿ"

ಆ ಮುಸಲ್ಮಾನ ಯುವಕನಿಗೆ ನನ್ನ ಹಂಬಲವು ಹತ್ತಿತು; ಆದರೆ ಅಷ್ಟು ದುಡ್ಡು ಒಮ್ಮೆಲೆ ಕೊಡುವದಕ್ಕೆ ಮಾತ್ರ ಅವನ ಮನಸ್ಸು ಗಟ್ಟಿಯಾಗಲೊಲ್ಲದಾದುದರಿಂದ, ಅವನು ಇಂದು-ನಾಳೆ ಎಂದು ಎಂಟು ದಿನ ಕಳೆದನು. ಇಂದೇ ಬೆಳಿಗ್ಗೆ ಅವನು ತಾನು ಕೊಡಬೇಕಾಗಿದ್ದ ೫ ಸಹಸ್ರ ರೂಪಾಯಿಗಳ ನೋಟುಗಳನ್ನು ನನ್ನ ಸಮಕ್ಷಮ ಆ ಝುಟಕಾದವನಿಗೆ ಒಪ್ಪಿಸಿ, ಆ ಮನೆಯ ಕೀಲೀಕೈಯನ್ನು ತನ್ನ ವಶಕ್ಕೆ ತಕ್ಕೊಂಡಿದ್ದನು. ಇಂದು ಸಂಜೆಗೆ ಬಂದು ಅವನು ನನ್ನ ಕೌಮಾರ್ಯವನ್ನು ಭಂಗಪಡಿಸಿ, ತನ್ನ ಮನೆಗೆ ಕರೆದೊಯ್ಯುತಕ್ಕವನು. ಅಷ್ಟರಲ್ಲಿ ದೈವಬಲದಿಂದ ನನ್ನ ಬಿಡುಗಡೆಯಾಯಿತು! ಆ ಕೊಂಗನಾರು? ಶಿತಿಕಂಠನಾರು? ಎಂಬ ಯಾವ ವಿಷಯವೂ ನನಗರಿಯದು; ಆದರೆ ಅವರೀರ್ವರೂ ನೇರಿ ನನ್ನನ್ನೂ, ನನ್ನ ಅಕ್ಕ-ತಂಗಿಯರನ್ನೂ ಹೆರವರಿಗೆ ಮಾರಿ, ದುಡ್ಡುಗಳಿಸಲೆಳಿಸಿದ್ದ ಠಕ್ಕರೆಂಬದು ಮಾತ್ರ ಖಂಡಿತವು. ಇದಕ್ಕೂ ಹೆಚ್ಚು ಸಂಗತಿಯು ನನಗೆ ತಿಳಿಯದು."

ಆ ಹುಡುಗಿಯ ಆ ಜವಾಬನ್ನು ಕೇಳಿ, ನಮ್ಮೂರವರ, ಅದರಲ್ಲಿಯೂ ಮನೆಯಲ್ಲಿ ಹರೆಯದ ಹೆಣ್ಣುಮಕ್ಕಳು ಸೊಸೆಯಂದಿರಿದ್ದವರ ತಲ್ಲಣವು ಹಾರಹತ್ತಿತು. ನಮ್ಮೂರ ಚಾಣಾಕ್ಷರು ದಂಗುಬಡಿದರು. ಪೋಲೀಸರಿಗಂತೂ ಶಿತಿಕಂಠನನ್ನೂ, ಆತನ ಸಂಗಡಿಗನನ್ನೂ ಗೊತ್ತುಹಚ್ಚುವದು ಅಸಾಧ್ಯ ಕೆಲಸವಾಯಿತು.

ಶಿತಿಕಂಠನು ನಮ್ಮೂರಿಂದ ಓಡಿಹೋಗುವ ಮೊದಲೇ ನಮ್ಮೂರವರಲ್ಲಿಯು ಎಷ್ಟೋ ಒಡವೆಗಳನ್ನು ಎತ್ತಿ ಹಾಕಿದ್ದನು; ಆದರೆ ಅವುಗಳನ್ನು ಅವನು ಕಳವು ಮಾತ್ರ ಮಾಡಿರಲಿಲ್ಲವೆಂದು ನಾವು ಎದೆತಟ್ಟಿ ಹೇಳುತ್ತೇವೆ. ನಿಮ್ಮ ಪೀತಾಂಬರವು ನನಗೊಳ್ಳೇ ಒಪ್ಪುತ್ತದಲ್ಲವೇ? ಎಂದು ಒಬ್ಬರ ಪೀತಾಂಬರವನ್ನು ಉಡಲಿಕ್ಕಾಗಿ ಇಸಕೊಂಡೊಯ್ದು ತಿರುಗಿ ಕೊಡಲೇ ಇಲ್ಲ. ಒಬ್ಬನ ಉಂಗುರವನ್ನು ಇಸಕೊಂಡು ಇದು ನನ್ನ ಅಂಗುಲಿಗೆ ಸರಿಯಾಗುವದಲ್ಲವೇ? ಎಂದು ತನ್ನ ಬೆರಳಿಗೆ ಹಾಕಿಕೊಂಡವನು ದೀವಳಿಗೆ ಆಗುವ ವರೆಗೆ ಇದು ನನ್ನಲ್ಲಿಯೇ ಇರಲೆಂದು ಅವನಿಗೆ ಹೇಳಿ, ದೀವಳಿಗೆಯು ಮುಗಿಯುವಷ್ಟರಲ್ಲಿ ಆ ಉಂಗುರದೊಡನೆ ತಾನೇ ದಿವಾಳಿ ತೆಗೆದಿದ್ದನು. ತನ್ನ ಹೆಸರಿಗೆ ತರಿಸುತ್ತಿದ್ದ ವ್ಹಿ. ಪಿ. ಗಳಿಗಾಗಿ ನಮ್ಮೂರ ಪೋಸ್ಟಮಾಸ್ತರರಲ್ಲಿ ೮-೧೦ ರೂಪಾಯಿ ಡಿಪೋಜಿಟಾಗಿಟ್ಟಿದ್ದ ಅವನು, ದೀವಳಿಗೆಯ ಹಬ್ಬದಲ್ಲಿ ತರಿಸಿದ್ದ ಗಂಧದ ಬಿಲ್ಲೆ ಸುಗಂಧದ ದ್ರವ್ಯ, ಕೆಲವು ಚಿಕ್ಕ-ಪುಟ್ಟ ವಸ್ತು ಮುಂತಾದ ನೂರಾರು ರೂಪಾಯಿ ಬೆಲೆಯ ೨-೩ ವ್ಹಿ. ಪಿ. ಗಳ ಹಣವನ್ನು ಹಬ್ಬದ ಮರುದಿನವೇ ಕೊಡುವೆನೆಂದು ಹೇಳಿ ಎತ್ತಿ ಹಾಕಿದ್ದನು. ಹೀಗೆ ಒಂದಲ್ಲ, ಎರಡಲ್ಲ. ಬೇರೆ ಬೇರೆ ಜನರಿಂದ ಬೇರೆ ಬೇರೆ ಸಾಮಾನುಗಳನ್ನು ಎತ್ತಿಹಾಕಿದ್ದನು; ಆದರೆ ಅವನು ಒಳ್ಳೇ ಕುಶಲನಾದುದರಿಂದ ಒಬ್ಬರಿಂದ ತೆಗೆದುಕೊಂಡ ಒಡವೆಯ ಸಂಗತಿಯು ಇನ್ನೊಬ್ಬರಿಗೆ ಕೊಂಚವೂ ತಿಳಿಯುದಂತೆ, ಬಹು ಜಾಗರೂಕತೆಯನ್ನಿಟ್ಟುಕೊಂಡಿರುತ್ತಿದ್ದನು!

ಶಿತಿಕಂಠನು ನಮ್ಮೂರಿಂದ ಹೋದಬಳಿಕ ೨-೩ ತಿಂಗಳಿಗೆ ನಮ್ಮೂರ ಆ ಮನೆಯ ಆ ಉಪವರ ಕನ್ಯೆಗೊಮ್ಮೆ ಮುಂದೆ ವಾರೆರಡು ವಾರಗಳ ನಂತರ ಆ ಮನೆಯ ಹಿರಿಯಳ ಹೆಸರಿಗೊಮ್ಮೆ ಹೀಗೆ ಎರಡು ಪತ್ರಗಳು ಬಂದಿದ್ದವು; ಅವು ಎಲ್ಲಿಂದ ರವಾನಿಸಲ್ಪಟ್ಟವೆಂಬದರ ಇತ್ಯರ್ಥವು ಆಗಲೇ ಇಲ್ಲ. ೨ನೇ ಪತ್ರದಲ್ಲಿ:--"ನಾನು ನಿಮ್ಮ ಚಿನ್ನಮ್ಮನನ್ನು ವರಿಸ ಬಯಸಿದ್ದೆನು; ಆದರೆ ಅವಳು ಆ ಊರ ಒಬ್ಬ ಮುಸಲ್ಮಾನ ತರುಣನನ್ನು ಮೋಹಿಸಿ ಭ್ರಷ್ಟಳಾಗುವ ಪ್ರಸಂಗ ಬಂದದರಿಂದ ನಾನು ಅವಳನ್ನು ತ್ಯಜಿಸಬೇಕಾಯಿತು. ನಿಮ್ಮ ಬೇರೆ ಮಗಳನ್ನು ಕೊಡುತ್ತಿದ್ದರೆ ತಿಳಿಸಿರಿ ಬರುವೆನು" ಎಂಬ ಸಂಗತಿಯಿತ್ತು.

ಶಿತಿಕಂಠನ ಪತ್ತೆಯು ಇದು ವರೆಗೂ ಆಗಲಿಲ್ಲ. ಆತನ ಠಕ್ಕತನಕ್ಕಾಗಿ ನಮ್ಮೂರ ಚಿಕ್ಕದೊಡ್ಡವರು, ಅಜ್ಞ-ತಜ್ಞರು ಈಗಲೂ ಬೊಟ್ಟು ಕಚ್ಚುತ್ತಿರುವರು. ಆದರೂ ನಮ್ಮೂರ ೯ + + + + ಮನೆಯ ಹಿರಿಯಳು ಇದು ವರೆಗೂ ಅವನನ್ನು ಠಕ್ಕನೆಂದು ಅನ್ನುವದಿಲ್ಲ. ಅವನು ಜಹಗೀರದಾರನೇ ಎಂದೂ, ನಮ್ಮೂರ ತಮಗಾಗದ ಜನರು ಅವನನ್ನು ದ್ವೇಷಿಸಿ, ಅವನ ಮೇಲೆ

ಇಲ್ಲದ-ಸಲ್ಲದ ಆರೋಪ ಹೊರಿಸಿರುವರೆಂದೂ ಅನ್ನುತ್ತಿರುವಳು. ಇದು ಜಗತ್ತಿನೊಳಗಿನ ವಿಚಿತ್ರಗಳಲ್ಲಿ ವಿಶೇಷ ವಿಚಿತ್ರವಾಗಿಲ್ಲವೆ?

ವಾಚಕರೇ, ನೀವು ಮೇಲಿನ ಸಂಗತಿಯನ್ನು ಓದಿ ಲೇಖಕನ ಅಸ್ಪುಟ ಸಂಗತಿಗಳ ಬಗ್ಗೆ ಬಹಳ ಕೋಪಗೊಂಡಿರಬಹುದು. ಈ ಮೂರ್ಖನು ಏನೇನು ಕೋದಿಕೊಳ್ಳಹತ್ತಿರುವನೋ ಎಂದು ತಿರಸ್ಕರಿಸುತ್ತಿರಬಹುದು. ಇಂಥ ಅಪದ್ಧ ಲೇಖಗಳನ್ನು ಬರೆಯುವದಕ್ಕಿಂತ + + + ನ ಕೆಲಸವನ್ನಾದರೂ ಮಾಡಬಾರದೇ ಎಂದು ಹೀಯ್ಯಾಳಿಸುತ್ತಿರಬಹುದು; ಆದರೆ ಮಹಾಶಯರೇ, ಅಷ್ಟು ರೇಗಿಗೇಳುವದು ನಿಮ್ಮಂಥ ಸುಜ್ಞರಿಗೆ ತಕ್ಕದ್ದಲ್ಲ. ಈಗ ಪಳೆಂಟು ವರ್ಷಗಳಾಚೆಗೆ ಮಾಯವಾಗಿ ಹೋಗಿದ್ದ ಆ ನಮ್ಮ ಧೂರ್ತ ಶಿತಿಕಂಠನ ಘಾತುಕತನದ ಸಂಗತಿಯು ಮೊನ್ನೆ ನಮಗೊತ್ತಟ್ಟಿಗೆ ಓದಲು ಸಿಕ್ಕಿತು. ಅದನ್ನೇ ನಮ್ಮ ವಾಚಕರಿಗಾಗಿ ಇಲ್ಲಿ ಕೊಡುತ್ತೇವೆ ಸಾವಧಾನದಿಂದ ಓದಿಕೊಳ್ಳಿರಿ. ಅವಸರಪಡಬೇಡಿರಿ.

---

## ೩ನೇ ಮೆಟ್ಟಿಲು—ಕೊಲೆ.

“ಏನೆನಬೇಕು, ಈ ಮಾವನಿಗೆ? ಈ ಜಗತ್ತಿನಲ್ಲಿ ಎಲ್ಲರೂ ಪಾಪಿಗಳೇ ಏನು?” ಸೂರ್ಯನು ಮುಳುಗಿದ್ದನು; ಆದರೂ ಆತನ ಕೆಂಪುಕಿರಣಗಳು ಪಶ್ಚಿಮದಿಕ್ಕಿನ ಆಕಾಶದಲ್ಲಿ ಪಸರಿಸಿ, ಮನೋಹರವಾಗಿ ತೋರುತ್ತಲಿದ್ದವು. ಹೊಟ್ಟೆಯ ಪಾಡಿಗಾಗಿ ಇಡಿ ಹಗಲಲ್ಲಿ ಹಾರಾಡಿ ಸಂಗ್ರಹಿಸಿದ್ದ ಧಾನ್ಯದೊಡನೆ ಕಿಲಿಬಿಲಿ ಶಬ್ದ ಮಾಡುತ್ತ ನಡೆದಿದ್ದ ಪಕ್ಷಿಗಳು, ಒಮ್ಮೆ ಈ ಗಿಡದ ಟೊಂಗೆಯ ಮೇಲೆ, ಮತ್ತೊಮ್ಮೆ ಆ ಗಿಡದ ಹೊದರಿನಲ್ಲಿ, ಇನ್ನೊಮ್ಮೆ ಇನ್ನೊಂದು ಗಿಡದ ತುದಿಯ ಮೇಲೆ ಕೂಡ್ರುತ್ತ, ತಮ್ಮ ನಿಜನಿವಾಸಸ್ಥಳಕ್ಕೆ ಸಾಗಿದ್ದವು. ಸಾಯಂಕಾಲದ ಹೊತ್ತಾದ್ದರಿಂದ ತಂಪುಗಾಳಿಯು ಬೀಸುತ್ತಿತ್ತು. ಆ ಉಪವನವು ಅಷ್ಟು ದೊಡ್ಡದಲ್ಲವಾದರೂ ಪ್ರಸ್ತುತಕಾಲಕ್ಕನುಸಾರವಾಗಿದ್ದಿತು. ಅಲ್ಲಿಯ ಗುಲಾಬಿ, ಮಲ್ಲಿಗೆ, ಜಾಜಿ, ಶಾವಂತಿಗಿ ಮುಂತಾದ ಪುಷ್ಪಗಳ ಗಿಡ-ಬಳ್ಳಿಗಳೂ, ಚಿತ್ರವಿಚಿತ್ರವಾದ ಲತಾಮಂಟಪಗಳೂ ಇದ್ದು, ವಿರಹಿಗಳ ತಾಪವನ್ನು ನೀಗುತ್ತಿದ್ದವು. ಅಲ್ಲಿ ೧-೨ ಕೋಚಗಳೂ, ಆರಾಮಖುರ್ಚಿಗಳೂ ಇರಿಸಲ್ಪಟ್ಟಿದ್ದವು. ಆ ಉಪವನದ ನಟ್ಟನಡುವೆ ಸುಂದರವಾದದ್ದೊಂದು ಬಂಗಲೆಯಿದ್ದು, ಅದರೆದುರಿಗೆ ಒಂದು ಶುಭ್ರಜಲದ ಕಾರಂಜಿಯು ಹಗಲು-ರಾತ್ರಿಗಳೆನ್ನದೆ ಒಂದೇಸವನೆ ನೀರೆರಚುತ್ತಲಿತ್ತು. ಆ ಉಪವನವು ಮೈಸೂರ ಅರಮನೆಯ ಪಶ್ಚಿಮದಿಕ್ಕಿನಲ್ಲಿದ್ದಿತು. ಅದರಿಂದ ಅದರ ಹತ್ತಿರ ವಿಶೇಷವಾದ ರಹದಾರಿಯಿರಲಿಲ್ಲ.

ಎಂಕ್ಯಾಮಾವನು ಯಾವ ಊರವನೆಂಬುದು ಇದುವರೆಗೆ ಯಾರಿಗೂ ಗೊತ್ತಿ
ರಲಿಲ್ಲ; ಆದರೆ ಅವನು ಮೈಸೂರ ಸರಕಾರದಲ್ಲಿ ದೊಡ್ಡ ತಲಬಿನ ನೌಕರನಾ
ಗಿದ್ದದರಿಂದ, ಮೈಸೂರಲ್ಲೇ ತನ್ನ ಬಿಡಾರ ಮಾಡಿದ್ದನು. ಎಂಕ್ಯಾಮಾವ
ನಿಗೆ ಅರವತ್ತು ವರ್ಷಗಳು ತುಂಬಿದ್ದು, ಇಂದೇ ಅವನ ಷಷ್ಠ್ಯಪೂರ್ತಿಶಾಂತಿಯ
ದಿನವಾಗಿತ್ತು; ಆದರೆ ಅವನು ಆಧುನಿಕ ಪದ್ಧತಿಯವನಾದುದರಿಂದ ಶಾಂತಿ-
ಗಿಂತಿಗಳ ಆಡಂಬರಕ್ಕೊಳಗಾಗಿರಲಿಲ್ಲ ಅವನಿಗೆ ಇಂದು ಅರವತ್ತು ವರ್ಷಗಳು
ಸಂಪೂರ್ಣವಾಗಿದ್ದರೂ ಅವನ ದೇಹಸಾಮರ್ಥ್ಯವು ಚೆನ್ನಾಗಿದ್ದಿತ್ತು. ಇಂಥ
ಇಳಿವಯಸ್ಸಿನಲ್ಲಿಯೂ ಅವನು ಯಾವನೊಬ್ಬ ೨೫ ವರ್ಷದ ತರುಣನಂತೆ ಪರಿಶೋ
ಭಿಸುತಲಿದ್ದನು. ಎಂಕ್ಯಾಮಾವನು ಬಹು ದೊಡ್ಡ ಮನಸ್ಸಿನವನು. ಅವನಿಗೆ
ಪ್ರತಿಯೊಂದು ಸಂಗತಿಯಲ್ಲಿ ಆಡಂಬರವು ಬೇಕಾಗಿತ್ತು. ಅದರಿಂದ ಅವನು
ಮೈಸೂರಸರಕಾರದಿಂದ ಪೆನ್ಶನ್ (ಉಂಬಳಿ) ಪಡೆದು ೨-೩ ವರ್ಷಗಳಾಗಿದ್ದರೂ
ಅವನ ಮನೆಗೆ ಅವನ ಪೂರ್ವದ ನೌಕರ-ಚಾಕರರ, ಸ್ನೇಹಿತ-ಅಮಲ್ದಾರರ ಬರ
ಹೋಗೋಣವು ಯಥಾಪ್ರಕಾರ ನಡೆದೇ ಇದ್ದಿತು. ಅವನು ಬಹು ದೊಡ್ಡ ಹು-
ದ್ದೆಯ ನೌಕರನಾಗಿದ್ದದರಿಂದ, ಅವನ ಮನೆಗೆ ಇಷ್ಟು ಜನರ ರಹದಾರಿಯಿತ್ತೆಂದು
ಕೆಲವರು ಆಕ್ಷೇಪಿಸಬಹುದು; ಆದರೆ ತಾವು ನೌಕರಿಯಲ್ಲಿರುವಾಗ ತಮ್ಮ
ಉಗುಳು ಸಹ ದಾಟದೆಯಿದ್ದ ತಮ್ಮ ಕೈಕೆಳಗಿನ ಜನರು, ನೌಕರಿಬಿಟ್ಟ ಮರುದಿವ
ಸವೇ ತಮ್ಮ ನೆರಳಿಗೆ ಕೂಡ ನಿಲ್ಲದ್ದನ್ನು ಕಂಡು, ಎಷ್ಟೋ ಪೆನ್ಶನ್‌ದಾರರು ಅವ
ಮಾನಿತರಾಗಿ ಆತ್ಮಹತ್ಯೆ ಮಾಡಿಕೊಂಡ ಸಂಗತಿಯನ್ನು ನಮ್ಮಂತೆ ನಮ್ಮ ವಾಚ
ಕರೂ ಮನಗಂಡಿರಬಹುದು. ಈ ಸ್ಥಿತಿಯು ನಮ್ಮ ಎಂಕ್ಯಾಮಾವನದಿರಲಿಲ್ಲ.
ಎಂಕ್ಯಾಮಾವನ ಸಂಬಳವು ದೊಡ್ಡದು; ಅದರಲ್ಲಿಯೂ ಅವನ ಇಲಾಖೆಗೆ++
ಅನುಕೂಲವು ಚೆನ್ನಾಗಿದ್ದಿತು ಹೀಗಾಗಿ ಅವನು ಲಕ್ಷಗಟ್ಟಲೆ ಧನಸಂಪಾದಿ
ಸಿದ್ದನು. ದೈವದ ಬಲವೊಂದಿದ್ದರೆ ಉಳಿದ ಅನುಕೂಲತೆಗಳು ತನ್ನಷ್ಟಕ್ಕೆ ತಾನೇ
ಕೈಗೂಡುವವೆಂಬಂತೆ, ಎಂಕ್ಯಾಮಾವನ ಅಪುತ್ರವತಿ ಹಾಗು ಸದಾರೋಗಿಷ್ಠಳಾದ
ಹೆಂಡತಿಯು ಕೆಲಮಾಸಗಳ ಮುಂದೆ ಮೃತಹೊಂದಿ ಅವನ ಸಂಪದಭಿವೃದ್ಧಿಗೆ
ಕಾರಣಳಾಗಿದ್ದಳು. ಯಾಕಂದರೆ, ಅವಳೊಬ್ಬ ಧನಾಢ್ಯ ಜಹಗೀರದಾರನ
ಮಗಳಾಗಿದ್ದು, ಅವಳ ತಂದೆಗೆ ಮತ್ತಾರೂ ಮಕ್ಕಳಾಗಲಿ, ಸಮೀಪದ ಹಕ್ಕು
ದಾರರಾಗಲಿ ಇರಲಿಲ್ಲ. ಅದರಿಂದ ಅವರ ಪಶ್ಚಾತ್ ಅವರ ಎಲ್ಲ ಆಸ್ತಿಗೆ ಅವರ
ಮಗಳೇ ಮಾಲಿಕಳಾಗಿದ್ದಳು. ಎಂಕ್ಯಾಮಾವನ ಹೆಂಡತಿಯು ಮನಸ್ಸಿನಲ್ಲಿ
ತಮ್ಮ ಮೈದುನನ ಮಗನನ್ನು ದತ್ತಕ ತಕ್ಕೊಳ್ಳುವದಿದ್ದಿತು; ಆದರೆ ಎಂಕ್ಯಾ
ಮಾವನು ಅದಕ್ಕೆ ತೀರ ವಿಪರೀತ ಮತದವನು. ಅದರಿಂದ ಇತರ ಸುಖವೆಷ್ಟಿ

ದ್ದರೂ ಆ ಗಂಡ-ಹೆಂಡಿರಲ್ಲಿ ದಿನಾಲು ಈ ಬಗ್ಗೆ ಜಗಳ-ತಂಟೆಗಳು ನಡೆಯುತ್ತಿದ್ದವು. ಇತ್ತೀಚೆಗೆ ಆ ರೋಗಿಷ್ಟ ಹೆಂಡತಿಯು ತೀರಿಕೊಂಡದ್ದರಿಂದ, ಅವಳ ಆಸ್ತಿಯು ತಾಬೆಯು ದೊರೆತು, ಎಂಕ್ಯಾಮಾವನ ಸಂತೋಷವು ಉಕ್ಕೇರಹತ್ತಿತ್ತು. ಅವನೊಳ್ಳೇ ಆನಂದದಿಂದ ಕಾಲಯಾಪನೆ ಮಾಡುತಲಿದ್ದನು.

ತನ್ನ ಹೊಟ್ಟೆಯ ಮಕ್ಕಳಿರದ್ದರಿಂದ ಎಂಕ್ಯಾಮಾವನ ಹೆಂಡತಿಯು ತಮ್ಮ ಪರಿಚಯದ ಒಬ್ಬ ಅನಾಥ-ಅಲ್ಪ ವಯಸ್ಸಿನ ಹುಡುಗೆಯನ್ನು ಜೋಪಾನ ಮಾಡುತ್ತಿದ್ದಳು. ಆಕೆಯು ಸಾಯುವಾಗ ಆ ಹುಡುಗೆಗೆ ೧೫ ವರ್ಷಗಳು ತುಂಬಿದ್ದವು. ತನ್ನ ಮೈದುನನ ಮಗನನ್ನು ದತ್ತು ಅಂತಾ ಮಾಡಿಕೊಂಡು, ತನ್ನ ಈ ಸಾಕುಮಗಳೊಡನೆ ಅವನ ವಿವಾಹ ಮಾಡಿದರೆ, ತಮ್ಮ ಕುಟುಂಬವು ಸಂತೋಷದಿಂದ ಪರಿಪೂರ್ಣವಾಗುವದೆಂದು ಆಕೆಯ ಬಯಕೆಯಾಗಿತ್ತು; ಆದರೆ ದೇವರ ಮನಸ್ಸಿನಲ್ಲಿ ಅವಳ ಇಚ್ಛೆಯನ್ನು ಈಡೇರಿಸುವದಿರಲಿಲ್ಲ! ಹೆಂಡತಿಯು ತೀರಿಕೊಂಡ ಬಳಿಕ ಆ ಹುಡುಗೆಯ ಸಂರಕ್ಷಣದ ಭಾರವು ಎಂಕ್ಯಾಮಾವನ ಮೇಲೆಯೇ ಸಂಪೂರ್ಣವಾಗಿ ಬಿತ್ತು. ಅವನಾದರೂ ಆ ಬಾಲಿಕೆಯನ್ನು ಚಿಕ್ಕಂದಿನಿಂದ ಬಹು ಪ್ರೀತಿಯಿಂದ ಸಲಹಿದ್ದನು; ಆದರೆ ಆ ಹುಡುಗೆಗೆ ಈಗ ೧೫ ತುಂಬಿ ೧೬ ರಲ್ಲಿ ಬಿದ್ದಿತ್ತು. ಮೊದಲೇ ಸುಂದರಾವಯವದ ಆ ಹುಡುಗೆಯು ತಾರುಣ್ಯದಲ್ಲಿ ಕಾಲಿಡಹತ್ತಿದ ಬಳಿಕ ಆಕೆಯು ನಯನಮನೋಹರಳಾಗಿ ಕಾಣಹತ್ತಿದಳೆಂದು ಹೇಳುವ ಕಾರಣವಿಲ್ಲ. "ಪ್ರಾಪ್ತೇತು ಷೋಡಶೇ ವರ್ಷೇ ಗಾರ್ದಭೀ ಚಾಪ್ಸರಾಯತೇ||" ಎಂಬ ಸುಭಾಷಿತಕಾರನ ನುಡಿಯಂತೆ ಸ್ತ್ರೀಜಾತಿಯು ತಾರುಣ್ಯದಷ್ಟು ಇತರ ಯಾವ ಅವಸ್ಥೆಯಲ್ಲೂ ಮನೋಹರವಾಗಿ ತೋರುವದಿಲ್ಲ. ಆಕೆಯ ಈ ಸೌಂದರ್ಯವೃದ್ಧಿಯೇ ನಮ್ಮ ಎಂಕ್ಯಾಮಾವನ ಅಧಃಪತನಕ್ಕೆ ಮೂಲವಾಯಿತು!

ಇತ್ತೀಚೆಗೆ ಎಂಕ್ಯಾಮಾವನು ಅವಳನ್ನು ಈ ವರೆಗಿನ ತನ್ನ ಸಾಕುಮಗಳನ್ನು ನೋಡುವ ದೃಷ್ಟಿಯಿಂದ ನೋಡದಾಗಿದ್ದನು. ಚಿಕ್ಕಂದಿನಿಂದ ಅವನು ಅವಳನ್ನು ಸಾಕಿ, ಸಲಹಿ, ಶಿಕ್ಷಣ ಕೊಡಿಸಿದ್ದನು. ಅಲ್ಲದೆ ಆ ಬಾಲಿಕೆಯ ಪೂರ್ವೇತಿಹಾಸವು ಆ ಮೈಸೂರವಂಗೇನೂ ಗೊತ್ತಿರದ್ದರಿಂದ, ಅವಳನ್ನು ಎಂಕ್ಯಾಮಾವನ ಹೊಟ್ಟೆಯ ಮಗಳೆಂದೇ ಅಲ್ಲಿಯ ಎಲ್ಲರೂ ತಿಳಕೊಂಡಿದ್ದರು. ಅವಳು ಇಂಗ್ಲಿಷ ಅಪ್ಪರಸೆಕಂಡರಿ ಕ್ಲಾಸಿನಲ್ಲಿ ಓದುತ್ತಿದ್ದಳು; ಆದರೆ ಈಗ ವಾರೆರಡು ವಾರಗಳಿಂದ ಅವಳ ಚಿತಸ್ವಾಸ್ಥ್ಯವಿರದ್ದರಿಂದ, ಅವಳು ಶಾಲೆಗೆ ಹೋಗುತ್ತಿರಲಿಲ್ಲ. ಹೆಂಡತಿಯು ಸಾಯುವವರೆಗೂ ಅದೇಕೆ, ಸುತಿಗೆ ಹದಿನೈದು ವರ್ಷ ತುಂಬುವವರೆಗೂ ಎಂಕ್ಯಾಮಾವನು ಅವಳನ್ನು ಹೊಟ್ಟೆಯ ಮಗಳಂತೆಯೇ

ನೋಡುತ್ತಿದ್ದನು; ಆದರೆ ಹೇಗೆ ಹೇಗೆ ಅವಳ ಅವಯುವಗಳು ತಾರುಣ್ಯದಿಂದ ಪುಷ್ಟವಾಗಲಾರಂಭಿಸಿದವೋ, ಹಾಗೆ ಅವಳನ್ನು ನೋಡುವ ನಮ್ಮ ಎಂಕ್ಯಾಮಾವನ ದೃಷ್ಟಿಕೋನವು ವಕ್ರೀಕೃತವಾಯಿತು. ಅವನಲ್ಲಿಯು ಪಿತೃಪ್ರೇಮವು ಪರಿವರ್ತನ ಹೊಂದಿ, ವಿಷಯಿಕ ಪ್ರೇಮವು ಇಣಿಕಿಹಾಕತೊಡಗಿತು. ಆ ನಮ್ಮ ಇಳಿವಯಸ್ಸಿನ ಎಂಕ್ಯಾಮಾವನಲ್ಲಿ ವೈರಾಗ್ಯದ ಬದಲು ವಿಲಾಸ ಲಾಲಸೆಯು ಉಂಟಾಯಿತು. ಅವನು ಸುಶಿಯನ್ನು ನೋಡಿದ ಹಾಗೆಲ್ಲ ಅವನ ಮನಸ್ಸಿನಲ್ಲಿ ವಿಷಯಿಕಪ್ರೇಮವು ಒಕ್ಕರಿಸಹತ್ತಿತು. ಅದರಿಂದ ಅವನು ಹುಚ್ಚು ಹಿಡಿದವನಂತೆ ವರ್ತಿಸಹತ್ತಿದನು. ಸುಶಿಯನ್ನು ಅಗಲಿ ಕ್ಷಣಕಾಲ ಸಹ ಇರದಾದನು. ಮೊದ ಮೊದಲು ಸುಶಿಗೆ-ಆ ಮುಗ್ಧ ನವತರುಣಿಗೆ-ಎಂಕ್ಯಾಮಾವನ ಪ್ರೇಮಪರಿವರ್ತನದ ಜ್ಞಾನವಾಗಲಿಲ್ಲ. ಅವಳು ಚತುರಳೂ, ಕುಶಲಳೂ ಇದ್ದುದರಿಂದ ಎಂಕ್ಯಾಮಾವನ ಈ ಹುಚ್ಚುಚ್ಚಾರದ ಮರ್ಮವು ಅವಳಿಗೆ ಕ್ರಮೇಣ ಗೊತ್ತಾಯಿತು. ಒಂದು ರಾತ್ರಿಯಲ್ಲಂತೂ ಅದು ಅವಳ ನಿದರ್ಶನಕ್ಕೆ ಚನ್ನಾಗಿ ಬಂತು.

ಒಂದು ದಿನ ರಾತ್ರಿ ಭೋಜನಾನಂತರ ಸುಶೀಲೆಯು ತನ್ನ ಕೋಣೆಯಲ್ಲಿ ಉಪವನದ ಕಿಟಕಿಯ ಕಡೆಗೆ ಮೋರೆ ಮಾಡಿ ನಿಂತುಕೊಂಡಿದ್ದಳು. ಇಷ್ಟರಲ್ಲಿ ಬೆಕ್ಕಿನ-ಕಳ್ಳ-ಹೆಜ್ಜೆಯಿಂದ ಎಂಕ್ಯಾಮಾವನು ಅಲ್ಲಿಗೆ ಹೋಗಿ, ಹಿಂದು ಮುಂದಿನ ಯಾವ ವಿಚಾರವನ್ನೂ ಮಾಡದೆ, ಅವಳನ್ನು ಬಿಗಿಯಾಗಿ ಅಪ್ಪಿಕೊಂಡನು; ಅವಳ ಗದ್ದವನ್ನು ಹಿಡಿದನು. ಇನ್ನು ಅವನು ಅದಕ್ಕೂ ಮುಂದಿನ ಪ್ರಣಯ ಪ್ರಯೋಗಕ್ಕೆ ಪ್ರಾರಂಭಿಸತಕ್ಕವನಿದ್ದನು. ಅಷ್ಟರಲ್ಲಿ ಸುಶೀಲೆಯು ಕಸುವಿನಿಂದ ಅವನ ಬಾಹುಪಾಶದೊಳಗಿಂದ ಪಾರಾಗಿ ದೂರ ಸರಿದು ನಿಂತು:—ಎಂಕ್ಯಾಮಾವಾ, ಇದೇನು ಹುಚ್ಚುಚ್ಚಾರ? ಎಂದು ಸಿಟ್ಟಿನಿಂದ ಪ್ರಶ್ನೆ ಮಾಡಿದಳು. ಎಂಕ್ಯಾಮಾವನು ಆಗ ನಾಚಿಕೆಗೆಟ್ಟಿದ್ದನು. ಅದರಿಂದ ಅವನು ಮುಗುಳು ನಗೆ ನಗುತ್ತ ಅವಳ ಹತ್ತರ ಬಂದು, ತನ್ನ ದುಷ್ಟ ಉದ್ದೇಶವನ್ನು ಅವಳಿಗೆ ತಿಳಿಸಿದನು. ಅದನ್ನು ಕೇಳಿ ತನ್ನ ತಲೆಯ ಮೇಲೆ ಒಮ್ಮೆಲೆ ಸಿಡಿಲು ಬಿದ್ದಂತೆ ಅವಳಿಗೆ ಭಾಸವಾಯಿತು. ಕಲ್ಲುಗೊಂಬೆಯಂತೆ ಅವಳು ಸ್ತಬ್ಧಳಾಗಿ ನಿಂತಳು. ಕೆಲಹೊತ್ತಿನ ಮೇಲೆ ಅವಳು ಎಂಕ್ಯಾಮಾವನಿಗೆ ಚೆನ್ನಾಗಿ ಬುದ್ಧಿ ಹೇಳಿದಳು. ಅವಳ ಮಾತಿನಿಂದ ಅವನಿಗೆ ಜನಲಜ್ಜೆ-ಮನಲಜ್ಜೆಗಳುಂಟಾಗದಿದ್ದರೂ ತನ್ನ ಇಳಿವಯಸ್ಸಿನ ವಿಷಯವಾಗಿ ನಾಚಿಕೆಯುಂಟಾಯಿತು. ಅದರಿಂದ ಅವನು ಆಗಿನ ಮಟ್ಟಿಗೆ ಆತ್ಮಸಂಯಮನ ಮಾಡಿದನು; ಆದರೆ ಮುದುಕರಿಗೆ ಇಂಥ ಯಾವುದೊಂದು ಹುಚ್ಚು ಹಿಡಿಯಿತೆಂದರೆ, ಬ್ರಹ್ಮದೇವನ ತಂದೆಯಿಂದಲೂ ಅವರ ಆ ಹುಚ್ಚನ್ನು ಬಿಡಿಸುವದಾಗುವದಿಲ್ಲ.

ಎಂಕ್ಯಾಮಾವನು ದಿನಾಲು ಸುಶೀಲೆಯನ್ನು ತನ್ನ ಬಳಿಗೆ ಕರೆದು ಆಕೆಗೆ ತನ್ನಿಚ್ಛೆಯನ್ನು ಪೂರಯಿಸುವ ವಿಷಯವಾಗಿ ಹೇಳಿಕೊಳ್ಳುತ್ತಿದ್ದನು. ಅವನು ಆಕೆಗೆ ತನ್ನ ಅಪಾರ ಸಂಪತ್ತಿಯ ಬಲಿಯೊಡ್ಡಿದನು; ಈ ವರೆಗೆ ಅವಳ ಸಾಕಿ ಸಲುಹಿದ ಉಪಕಾರದ ಹೊರೆಯನ್ನು ಹೊರಿಸಿದನು; ಇನ್ನೂ ಏನೇನೋ ಮೋಹದೋರಿದನು; ಆದರೆ ಇಡಿ ಬ್ರಹ್ಮಾಂಡದಲ್ಲಿಯ ಎಲ್ಲ ಅತ್ಯುತ್ತಮ ವಸ್ತುಗಳನ್ನು ಕೊಟ್ಟರೂ ಅರವತ್ತು ವರ್ಷದ ಮುದುಕನನ್ನು ಅದಾವ ಷೋಡಶ ವರ್ಷದ ತರುಣಿಯು ಲಗ್ನವಾದಾಳು? ಎಂಕ್ಯಾಮಾವನ ಈ ಉಪಟಳದಿಂದ ಸುಶೀಲೆಗೆ ತೊಂದರೆಯಾಗಲಾರಂಭಿಸಿತು. ಆದರಿಂದ ಎಲ್ಲಿಯಾದರೂ ಹೊರಟು ಹೋಗಬೇಕೆಂದು ಅವಳಿಗನಿಸಹತ್ತಿತು. ಈಗ ಅವಳು ಅದೇ ವಿಷಯವನ್ನು ಆಲೋಚಿಸುತ್ತ ಆ ಉಪವನದೊಳಗೆ ಅಡ್ಡಾಡುತ್ತಿದ್ದಳು; ಹಾಗು ಅವಳ ಬಾಯಿಂದಲೇ ಈ ಪ್ರಕರಣದ ಪ್ರಾರಂಭದಲ್ಲಿ ಕೊಟ್ಟ ವಾಕ್ಯವು ಹೊರಬಿದ್ದಿತು. ಅವಳು ಆ ಉಪವನದೊಳಗೆ ತನ್ನಷ್ಟಕ್ಕೆ ತಾನೇ ಮಾತಾಡಹತ್ತಿದಳು:—

"ಅಬ್ಬಬ್ಬ! ಎಂಥ ದುಷ್ಟ ವಾಸನೆಯಿದು? ಅರವತ್ತರ ಮನೆದಾಟಿದವನೂ ಸ್ಮಶಾನದ ಹಾದಿಯಲ್ಲಿರುವವನೂ, ಮೃತ್ಯುದೇವತೆಯ ಆಮಂತ್ರಣವನ್ನು ಸ್ವೀಕರಿಸಿದವನೂ ಆದ ಅಜ್ಜನು-ಮುದಿಹದ್ದು-ಮರಿಮಗಳನ್ನು ಪಾಪದೃಷ್ಟಿಯಿಂದ ಅವಲೋಕಿಸಹತ್ತುವದೆಂದರೆ ಜಗತ್ತಿನ ಓಘವೇ ತಿರುಗಿತೆಂದು ತಿಳಿಯಬೇಕಲ್ಲವೆ? ಮಾಮಾ, ನಿನ್ನ ಬುದ್ಧಿಯು ಹೀಗೇಕೆ ಕೆಟ್ಟಿತು? ಮಗಳೆಂದು ನನ್ನನ್ನು ಸಾಕಿ, ಸಲುಹಿ, ದೊಡ್ಡವಳನ್ನಾಗಿ ಮಾಡಿ, ನನ್ನ ಹೆತ್ತ ತಂದೆಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ನೀನು, ಈಗ ಹೀಗೇಕೆ ಮಾಡುವೆ? ಮಾಮಾ, ಜಗತ್ತೆಲ್ಲ ಪಾಪದಿಂದಲೇ ತುಂಬಿರುತ್ತದೇನು? ಎಲಲ! ನೀನು ನನಗೆ ಮಾಡಿದ ಉಪಕಾರವನ್ನು ನನ್ನನ್ನು ನಿನ್ನ ಅರ್ಧಾಂಗಿಯನ್ನಾಗಿ ಮಾಡಿಕೊಂಡು ತೀರಿಸಿಕೊಳ್ಳಲಿಚ್ಛಿಸುವಿಯಲ್ಲವೆ?" ಹೀಗೆ ಸುಶೀಲೆಯು ಒಟಗುಟ್ಟುತ್ತ ಮೂರುಸಂಜೆಯ ಹೊತ್ತಿನಲ್ಲಿ ಆ ಉಪವನದೊಳಗಿನ ಒಂದು ಕೋಚದ ಮೇಲೆ ಕುಳಿತಿರುವಾಗ ತನ್ನ ಹೆಸರುಗೊಂಡು ಕರೆಯುತ್ತಿರುವದು ಅವಳಿಗೆ ಕೇಳಿಸಿತು. ಆಕೆಯು ಒಮ್ಮೆಲೆ ಮೆಟ್ಟಿಬಿದ್ದು ಹಿಂದಿರುಗಿ ನೋಡುತ್ತಾಳೆ, ಎಂಕ್ಯಾಮಾವನು ಅದೇ ಕೋಚದ ಮೇಲೆ ಬಂದು ಕುಳಿತಿದ್ದನು. ಕೂಡಲೆ ಸುಶೀಲೆಯು ಎದ್ದು ತುಸ ಹಿಂದಕ್ಕೆ ಸರಿದು, ತಲೆ ಕೆಳಗೆ ಮಾಡಿ ನಿಂತಳು. ಎಂಕ್ಯಾಮಾವನು ಅವಳ ಮುಖದ ಕಡೆಗೆ ಕ್ಷಣಕಾಲ ದಿಟ್ಟಿಸಿ ನೋಡಿ:—ಸುಶೀಲೇ, ಕಡೆಗೆ ನಿನ್ನ ಅಂದೋಣವೇನಾಯಿತು? ಹುಚ್ಚಳ ಹಾಗೆ ಇದೇನು ನಡಿಸಿರುವೆ? ತಲೆಬಾಗಿಲಿನ ವರೆಗೆ ತಾನಾಗಿಯೇ ಬಂದ ಈ ವೈಭವವನ್ನು ಕಾಲಿನಿಂದ ಸರಿಸಿ, ಈ ಸುಸಮಯವನ್ನು ಕಳಕೊಳ್ಳಬೇಡ,

ಕಂಡಿಯಾ? ಎಂದನು.

"ಮಾವಾ, ಯಾರೊಬ್ಬರಿಗೆ ಹೊಟ್ಟೆತುಂಬುವ ತನಕ ಇಚ್ಛಾ ಭೋಜನ ಮಾಡಿಸಿ, ಕಡೆಗೆ ಅವನನ್ನು ಒದೆದು ಹೊರಗೆ ಹಾಕಿಸುವದು ನಿಮಗೆ ಇಷ್ಟವಾಗಿ ಕಾಣುವದೊ? ಇದೆಂಥ ಹೊಲಸು ಇಚ್ಛೆಯು ನಿಮಗೀ ಇಳಿವಯಸ್ಸಿನಲ್ಲಿ ಉಂಟಾಯಿತು? ತಂದೆಯು ಮಗಳನ್ನು ವಕ್ರದೃಷ್ಟಿಯಿಂದ ನೋಡಿದ ಸಂಗತಿಯನ್ನು ಕೇಳಿ-ನೋಡಿಯಾದರೂ ಗೊತ್ತಿದೆಯೆ? ನನ್ನ ನಿಮ್ಮ ವಯೋಮಾನದ ಮಾತನ್ನು ಒತ್ತಟ್ಟಿಗಿಟ್ಟರೂ, ನೀವು ನನ್ನನ್ನು ನಿಮ್ಮ ಹೊಟ್ಟೆಯ ಮಗಳಂತೆ ಸಾಕಿ ಸಲಹಲಿಲ್ಲವೆ? ಇವಳು ನನ್ನ ಮಗಳೆಂದು ನೀವು ಈ ಮೈಸೂರ ನಿವಾಸಿಗಳಿಗೆಲ್ಲ ಸ್ವಮುಖದಿಂದ ತಿಳಿಸಿಲ್ಲವೆ? ಮತ್ತು ಇಂದು ಆ ನನ್ನನ್ನೇ ನೀವು ಲಗ್ನವಾದ ಸುದ್ದಿಯನ್ನು ಕೇಳಿ ಇಲ್ಲಿಯ ಜನರು ನಿಮಗೇನಂದಾರು? ನನ್ನ-ನಿಮ್ಮ ಶೀಲದ ವಿಷಯವಾಗಿ ಜನರೆಷ್ಟು ಆಡಿಕೊಂಡಾರು? ಪಿತೃಪ್ರೇಮದಿಂದ ಮತ್ತವಾದ ಹೃದಯವು ದಾಂಪತ್ಯಪ್ರೇಮಕ್ಕೆ ಹೇಗೆ ಒಲಿಯಾದೀತು? ಮಾವಾ, ನಾನು ನಿನ್ನ ಕಾಲು ಬೀಳುತ್ತೇನೆ, ಮಗಳೆಂದು ತಿಳಿದು ನನ್ನನ್ನು ಕ್ಷಮಿಸು. ಮುದಿಹುಚ್ಚು ಹಿಡಿದ ನೀನು ನಿನ್ನಂತೆ ನನ್ನನ್ನೂ ರಸಾತಳಕ್ಕಿಳಿಸಲು ಯತ್ನಿಸಬೇಡ; ನಾನು ನಿನ್ನ ಕೃಪೆಯ ಆವರಣದಿಂದ ಪರಿವೇಷ್ಟಿತಳಾದ ಅನಾಥ ಕನ್ನಿಕೆಯಾಗಿರುತ್ತೇನೆಂಬದನ್ನು ಮರೆಯಬೇಡ."

"ಸುಶೀ," ಎಂದು ಸಂಬೋಧಿಸಿ ಮಾವನು ಒಳ್ಳೇ ಆತ್ಮತೆಯಿಂದ ಮಾತನಾಡಲಾರಂಭಿಸಿದನು:—ಇಷ್ಟು ದಿವಸಗಳ ವರೆಗೆ ನಾನು ನಿನ್ನ ಕಡೆಗೆ ನನ್ನ ಮಗಳೆಂಬ ಭಾವನೆಯಿಂದಲೇ ನೋಡುತ್ತಿದ್ದೆನು; ನಿನ್ನ ಸುಖಸಮಾಧಾನದ ವಿಷಯವಾಗಿ ಹಗಲಿರುಳು ಚಿಂತಿಸುತ್ತಿದ್ದೆನು; ಆದರೆ ಇತ್ತೀಚೆಗೆ ನನ್ನ ಮನಸ್ಸು ಏಕೆ ತಿರುಗಿತೋ ನಾನರಿಯೆನು; ಆದರೆ ನೀನು ನನ್ನ ಮಗಳು; ನಾನು ನಿನ್ನ ತಂದೆ, ಎಂಬ ಲೌಕಿಕ ಶಬ್ದಗಳಿಂದೆಲ್ಲಿಯಾದರೂ ನಿಜವಾದ ರಕ್ತಸಂಬಂಧವುಂಟಾಗಬಲ್ಲದೆ? ಹಾಗಿಲ್ಲವೆಂತಲೇ ಪರಮೇಶ್ವರನು ನನ್ನ-ನಿನ್ನಲ್ಲಿ ಪತಿ-ಪತ್ನಿ ಸಂಬಂಧವನ್ನುಂಟುಮಾಡುವದಕ್ಕಾಗಿ ನನಗೀ ಇಚ್ಛೆಯನ್ನುಂಟುಮಾಡಿರುತ್ತಾನೆ.

"ಇದೆಲ್ಲ ನಿಮ್ಮ ಮನಸ್ಸಿನ ದುಷ್ಟಕಲ್ಪನೆಯು; ನೀವು ನಿಮ್ಮ ಮನಸ್ಸನ್ನು ಬಿಗಿದು ಕಟ್ಟಿದರೆ, ನಿಮ್ಮ ತಿಳಿಗೆಟ್ಟ ಕಲ್ಪನಾಚಿತ್ರಗಳೆಲ್ಲಾ ಬಯಲಾಗಿ ನಿಮ್ಮ ಮನಸ್ಸು ಹಾದಿಗೆ ಬಂದೀತು; ಮತ್ತು ನಿಮ್ಮ ಈ ಪಾಪ ಕೃತ್ಯದ ಬಗ್ಗೆ ನಿಮಗೆ ಖಂಡಿತವಾಗಿ ಪಶ್ಚಾತ್ತಾಪವಾದೀತು."

"ಸುಸೀ, ಪಾಪ ಪುಣ್ಯಗಳ ಬಗ್ಗೆ ನಿನ್ನೊಡನೆ ವಾದಿಸುವ ಇಚ್ಛೆಯು ನನಗಿಲ್ಲ; ಲೌಕಿಕಕ್ಕಾಗಿ ಕಲ್ಪಿಸಿಕೊಂಡ ಸಂಬಂಧಗಳು ನಿಜವಾದ ರಕ್ತಸಂಬಂಧ

ಗಳಿಂದಿಗೂ ಅಗಲಿರಿಯವು. ಇಂದಿನ ವರೆಗೆ ನೀನು ನನ್ನೆಡೆಯಲ್ಲಿ ಯಾವು ದೊಂದು ಇಚ್ಛಿತ ವಸ್ತುವಿಗಾಗಿ ಯಾಚಿಸುತ್ತಿದ್ದೆ; ಆದರೆ ಈಗ ನಾನೇ ಒಂದು ಮಾತಿಗಾಗಿ ನಿನ್ನನ್ನು ಯಾಚಿಸುತ್ತಿರುವೆನು. ನೀನು ನನಗೆ ನಿನ್ನ ಪ್ರೇಮ ದಾನದ ಭಿಕ್ಷೆಯನ್ನು ನೀಡಿ, ನನ್ನಿಚ್ಛೆಯನ್ನು ಪೂರಯಿಸಬೇಕೆಂದು ನಾನು ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ. ನನ್ನನ್ನು ನಿರಾಶಗೊಳಿಸಿ ನಿನ್ನ ಕೃತಘ್ನತೆಯ ಬೆಂಕಿಯನ್ನು ನನ್ನ ಮೇಲೆ ತೂರ ಬೇಡ. ಪ್ರಿಯೇ, ಸುಶೀಲೆ'' ಎಂದೆಂದು ಮಾವನು ಅವಳನ್ನು ಆ ಉಪವನದಲ್ಲೇ ಆಲಿಂಗಿಸಹೋದನು.

ಆಗ ಕಣ್ಣಿಗೆ ನೀರು ತಂದು ಸುಶೀಲೆಯು:—“ಬೇಡ-ಬೇಡ; ಮಾವಾ, ನನ್ನನ್ನು ಸಿಟ್ಟಿಗೆಬ್ಬಿಸಿ, ನಿಮ್ಮ ಉಪಕಾರದ ಹೊರೆಗೆ ಯಾವದೊಂದು ಅಪ ಶಬ್ದವು ನನ್ನ ಬಾಯಿಂದ ಹೊರಟು ಅಪಕಾರದ ಕಿಡಿಹತ್ತುವಂತೆ ಮಾಡಬೇಡಿರಿ. ಅಯ್ಯೋ! ದೇವರೇ, ನನ್ನನ್ನು ಇದಕ್ಕಾಗಿಯೇ ಜೀವದಿಂದಿಟ್ಟಿರುವೆಯಾ? ನನ್ನ ತಾಯಿ-ತಂದೆಗಳ ಮರಣದನಂತರ ಆಗಲೆ ನಾನೂ ಸತ್ತು ಹೋಗಿದ್ದರೆ, ನನಗೀ ದುರವಸ್ಥೆಯು ಎಲ್ಲಿ ಪ್ರಾಪ್ತವಾಗುತ್ತಿತ್ತು?'' ಎಂದೆಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆಗ ಎಂಕ್ಯಾಮಾವನಿಗೆ ತನ್ನ ಕೃತಿಯ ಬಗ್ಗೆ ಹೇಯ ವೆನಿಸಿತು; ಪ್ರಾಣವು ವ್ಯಾಕುಲವಾಯಿತು. ಆಗಲವನು ಎದ್ದು ನಿಂತು, ಮುಂದೆ ಸರಿದು ಆಕೆಯ ಬೆನ್ನ ಮೇಲೆ ಕೈಯಾಡಿಸುತ್ತ:—ಸುಶೀ, ಹೀಗೆ ಅತ್ತು ಅತ್ತು ನಿನ್ನ ಜೀವಕ್ಕೇಕೆ ಕಷ್ಟಕೊಡುತ್ತಿ? ಸುಮ್ಮನಿರು. ಈ ಮಾತಿನ ಆಲೋಚನೆಗಾಗಿ ನಾನು ನಿನಗೆ ಇನ್ನು ಎರಡು ದಿನಗಳ ಅವಧಿಯನ್ನು ಕೊಡು ತ್ತೇನೆ. ಅಷ್ಟರಲ್ಲಿ ನೀನು ನಿನ್ನ ಚಿತ್ತವನ್ನು ಸ್ಥಿರಗೊಳಿಸಿಕೊಂಡು ಈ ಸಂಗ ತಿಯ ಬಗ್ಗೆ ನಾಲ್ಕು ಕಡೆಯಿಂದಲೂ ತಿಳಿದು ನೋಡು. ನಡೆ, ರಾತ್ರಿಯಾ ಯಿತು. ಬಂಗ್ಲೆಗೆ ಹೋಗೋಣ. ನಿನಗೆ ಕೊಟ್ಟಿರುವ ಎರಡು ದಿನಗಳ ಅವಧಿಯಲ್ಲಿ ನಾನು ನಿನ್ನ ಹತ್ತರ ಕೂಡ ಬರುವದಿಲ್ಲ ನೀನೇ ಶಾಂತಮನಸ್ಸಿ ನಿಂದ ವಿಚಾರ ಮಾಡು, ಎಂದು ನುಡಿದನು.

“ನಡೆಯಿರಿ, ನಾನು ಇಷ್ಟರಲ್ಲೇ ಬರುವೆನು'' ಎಂದೆಂದು ಸುಶೀಲೆಯು ಆ ಕೋಚದ ಮೇಲೆ ಉಸಿರ್ಗರೆಯುತ್ತ ಕುಳಿತುಕೊಂಡಳು. “ಹಾಗೇ ಆಗ ಲೆಂ''ದು ಹೇಳಿ, ಎಂಕ್ಯಾಮಾವನು ಬಂಗ್ಲೆಯನ್ನು ಸೇರಿದನು.

ಆ ಮುದಿಹದ್ದು ಹೋದಬಳಿಕ ಈವರೆಗೆ ಅವರಿಸಿಕೊಂಡಿದ್ದ ತನ್ನ ದುಃಖ ವನ್ನು ಅವಳು ಸಡಿಲುಗೊಳಿಸಿದಳು. ಅವಳು ಎಷ್ಟೋ ಹೊತ್ತು ಬಿಕ್ಕಿ ಬಿಕ್ಕಿ ಅತ್ತಳು. ಕಡೆಗೆ ತನ್ನಷ್ಟಕ್ಕೆ ತಾನೇ ಶಾಂತಳಾಗಿ, ಮುಂದೇನು ಮಾಡಬೇಕೆಂಬ ಬಗ್ಗೆ ಆಲೋಚಿಸತೊಡಗಿದಳು. ಇಂದು ರಾತ್ರಿ ಮನೆಯಲ್ಲಿ ಎಲ್ಲರೂ ಮಲಗಿದ

ಬಳಿಕ ದಾರಿ ಸಿಕ್ಕತ್ತ ಹೊರಟುಹೋಗಬೇಕೆಂದು ಅವಳು ನಿರ್ಧರಿಸಿಕೊಂಡು, ಬಂಗ್ಲೆಯೊಳಗೆ ಹೋದಳು. ಬಹಳ ಹೊತ್ತಾದರೂ ಇವಳೇಕೆ ಬರಲಿಲ್ಲೆಂದು ಯೋಚಿಸುತ್ತ ಎಂಕ್ಯಾಮಾವನು ಬಂಗ್ಲೆಯ ಬಾಗಿಲಲ್ಲೇ ನಿಂತುಕೊಂಡಿದ್ದನು. ಅವನು ತನ್ನ ಭೋಜನವನ್ನು ಅಷ್ಟರಲ್ಲಿ ಮುಗಿಸಿಕೊಂಡಿದ್ದನು. ಅದರಿಂದ ಸುಶೀಲೆಯು ಮನೆಯೊಳಗೆ ಕಾಲಿಟ್ಟ ಕೂಡಲೆ ಅವನು ಅವಳಿಗೆ ಏನೂ ಹೇಳದೆ, ಅಡಿಗೆಯುವನನ್ನು ಕರೆದು ಆಕೆಗೆ ಉಣಬಡಿಸಹೇಳಿದನು.

ಒಡೆಯನ ಅಪ್ಪಣೆಯ ಮೇರೆಗೆ ಅಡಿಗೆಯುವನು ಸುಶೀಲೆಯನ್ನು ಊಟಕ್ಕೆ ಕರೆದನು. ತನಗೆ ಇಂದು ಹಸಿವೆಯಿಲ್ಲೆಂದು ತಿಳಿಸಿ ತನ್ನ ಕೋಣೆಯನ್ನು ಹೊಕ್ಕು ಬಾಗಿಲನಿಕ್ಕಿ ಒಳಗಿನಿಂದ ಚಿಲಕ-ಕೊಂಡಿಗಳನ್ನು ಹಾಕಿ, ಭದ್ರಪಡಿಸಿದಳು. ಬಳಿಕ ಅವಳು ತನ್ನ ಹಾಸಿಗೆಯ ಮೇಲೆ ಕುಳಿತು ಮತ್ತೆ ವಿಚಾರಮಾಡಲಾರಂಭಿಸಿದಳು. ಎಷ್ಟೋ ಹೊತ್ತು ಆಲೋಚನೆ ಮಾಡಿದನಂತರ ಅವಳು ತನ್ನ ಈ ಮೊದಲಿನ "ಎಲ್ಲರೂ ಮಲಗಿದ ಬಳಿಕ ಎಲ್ಲಿಯಾದರೂ ಹೊರಟು ಹೋಗುವ" ಬೇತನ್ನೇ ನಿಶ್ಚಯಿಸಿದಳು; ಆದರೆ ತನ್ನ ಬಾಲ್ಯಕಾಲದಿಂದಲೂ ತನ್ನನ್ನು ಸಂರಕ್ಷಿಸಿದ ಎಂಕ್ಯಾಮಾವನನ್ನು ಬಿಟ್ಟು ತಾನೆಲ್ಲಿಗೆ ಹೋಗಬೇಕೆಂಬದು ಆಕೆಗೆ ತಿಳಿಯದಾಯಿತು. ತಾನು ಇಲ್ಲಿಯೇ ಇದ್ದರೆ ಆತನ ಚಿತ್ತಚಾಂಚಲ್ಯವಾಗಿ ಉಚ್ಛೃಂಖಲತೆಯಿಂದ ಜನರೊಳಗೆ ನಗೆಗೀಡಾಗುವನು; ಹೀಗಾದರೆ ಪರ್ಯಾಯದಿಂದ ತಾನೇ ತನ್ನ ಉಪಕಾರಕರ್ತೃವಿಗೆ ಅಪಕಾರ ಬಗೆದಂತಾಗುವದು. ಆದ್ದರಿಂದ ತಾನೀಗ ಎಲ್ಲಿಯಾದರೂ ಹೊರಟು ಹೋಗುವದೇ ಯುಕ್ತವೆಂದು ಬಗೆದಳು. ಅಷ್ಟರಲ್ಲಿ ಅವರ ಮನೆಯ ಗಡಿಯಾರವು ೧೨ ಗಂಟೆಯನ್ನು ಬಾರಿಸಿತು. ಮನೆಯಲ್ಲಿ ಎಲ್ಲೆಡೆಯಲ್ಲೂ ನಿಃಶಬ್ದವಾಗಿತ್ತು. ಆಗ ಅವಳು ಮೆಲ್ಲನೆ ತನ್ನ ಕೋಣೆಯ ಬಾಗಿಲ ತೆರೆದು, ಆಳು-ಹೋಳುಗಳು ಮಲಗಿರುವ ಪಡಸಾಲೆಯ ಕಡೆಗೆ ಕಿವಿಗೊಟ್ಟು ಕೇಳಿದಳು. ಎಲ್ಲ ಆಳುಗಳೂ ಅಲ್ಲಿ ಘೊರ್ ಘೊರ್ ಎಂದು ನಿದ್ದೆಮಾಡುತ್ತಿದ್ದರು. ಬಳಿಕ ಸುಶೀಲೆಯು ಕಳ್ಳ ಹೆಜ್ಜೆಯಿಂದ ಯಾರಿಗೂ ಎಚ್ಚರವಾಗದಂತೆ ಬಂಗ್ಲೆಯ ತಲೆಬಾಗಿಲು ತೆರೆದು ಹೊರಗೆ ಬಂದಳು. ಅವಳು ಹೊರಗೆ ಬರುವಷ್ಟರಲ್ಲಿ ಯಾರೋ ಒಳಗೆ ಪ್ರವೇಶಿಸಿದ ಭಾಸವು ಅವಳಿಗಾಯಿತು; ಆದರೆ ಅದು ಕೇವಲ ಭಾಸವೇ ಎಂಬ ಬಗ್ಗೆ ಖಾತ್ರಿಯಾದ ಬಳಿಕ ಅವಳು ಹೊರಹೊರಟಳು. ಆ ಮಧ್ಯರಾತ್ರಿಯಲ್ಲಿ ಅಂದು ಹೆಚ್ಚಾಗಿ ಗಾಳಿ ಬೀಸುತಲಿತ್ತು. ನಿಚ್ಚಳವಾದ ಬೆಳದಿಂಗಳು ಬಿದ್ದಿತ್ತು. ಹೊರಹೊರಟ ಬಳಿಕ ಅವಳು ಒಮ್ಮೆಲೆ ಮೆಟ್ಟಿಬಿದ್ದಳು. ಪುನಃ ಧೈರ್ಯತಾಳಿ ಮಾವನ ಮೇಲಂತಸ್ತಿನ ಕೋಣೆಯ ಕಿಟಕಿಗಳ ಕಡೆಗೆ ದಿಟ್ಟಿಸಿ ನೋಡಿದಳು. ಅಲ್ಲಿ ಮಂದಪ್ರಕಾಶದ

ದೀಪವು ಉರಿಯುತಲಿತ್ತು. ಸುಶೀಲೆಯು ತವ್ಮ ಉಪವನವನ್ನು ಹೊಕ್ಕು, ಆ ಕಡೆಯ ಮಾವನ ಕೋಣೆಯ ಕಿಟಕಿಯಲ್ಲಿ ದಿಟ್ಟಿಸಿ ನೋಡಹತ್ತಿದಳು. ಅಲ್ಲಿಂದ ತನ್ನನ್ನು ಯಾರೂ ನೋಡತ್ತಿರುವದಿಲ್ಲೆಂಬದು ಮನವರಿಕೆಯಾದನಂತರ ಅವಳು ಅಡಗುತ್ತ ಅಡಗುತ್ತ ಆ ಉಪವನದ ಹೊರಬಾಗಿಲವನ್ನು ದಾಟಿದಳು. ಆಕೆಯು ಆ ಉಪವನದಿಂದ ಹೊರಬೀಳಲಿಕ್ಕೂ, ಎಂಕ್ಯಾಮಾವನ ಕೋಣೆಯೊಳಗಿಂದ "ಠಬ್" ಎಂದು ಬಂದೂಕಿನ ಸಪ್ಪಳವಾಗಲಿಕ್ಕೂ ಗಂಟೇಬಿದ್ದಿತು. ಆ ಕೂಡಲೆ ಸುಶೀಲೆಯು ಹಿಂದಿರುಗಿ ನಿಂತು ಮಾವನ ಕೋಣೆಯ ಕಿಟಕಿಯ ಕಡೆಗೆ ಮತ್ತೆ ದಿಟ್ಟಿಸಿ ನೋಡತೊಡಗಿದಳು. ಇಷ್ಟರಲ್ಲಿ ಅವಳಿಗೆ ಹುಸ ಸಂಶಯ ಬಂತು. ಎಂಕ್ಯಾಮಾವನಲ್ಲಿ ಏಳು ಕೊಳವೆಯ ರಿವ್ಹಾಲ್ವರ ಇದ್ದು, ಅವನಿಗೆ ಇಂದಿನ ತನ್ನ ಕೃತ್ಯದ ಬಗ್ಗೆ ಪಶ್ಚಾತ್ತಾಪವಾದುದರಿಂದ ಅವನು ಆತ್ಮಹತ್ಯಮಾಡಿಕೊಂಡಿರಬಹುದೆಂದು ಅವಳಿಗನಿಸಿತು

ಸುಶೀಲೆಯ ಮನಸ್ಸಿನಲ್ಲಿ ಈ ಕಲ್ಪನೆಯುಂಟಾದ ಕೂಡಲೆ ಅವಳ ಜೀವವು ವ್ಯಾಕುಲವಾಯಿತು. ಅವಳ ಕಾಲುಗಳು ಏಳದಾದವು. ಎಲ್ಲಿಯಾದರೂ ಹೊರಟು ಹೋಗಬೇಕೆಂದು ನಿಶ್ಚಯಿಸಿದ್ದ ಅವಳ ಬೇತು ತಿರುಗಿತು. ಆ ಕೂಡಲೆ ಅವಳು ವೇಗದಿಂದ ಪುನಃ ಆ ಬಂಗ್ಲೆಯನ್ನು ಪ್ರವೇಶಿಸಿದಳು. ಹೀಗೆ ಅವಳು ಒಳಗೆ ಬರುವಾಗಲೂ ಈ ಮೊದಲು ಕಂಡಂತೆ ಯಾರೋ ಒಳಗಿಂದ ಹೊರಗೆ ಹೋದ ಹಾಗೆ ಭಾಸವಾಯಿತು; ಆದರೆ ಈಗ ಅವಳಿಗೆ ಆ ಬಗ್ಗೆ ಹೆಚ್ಚು ವಿಚಾರಿಸುತ್ತ ನಿಲ್ಲಲಿಕ್ಕೆ ಅವಕಾಶವಿರಲಿಲ್ಲ. ಅದರಿಂದ ಅವಳು ಒಮ್ಮೆಲೆ ಅಟ್ಟವನ್ನೇರಿ ಎಂಕ್ಯಾಮಾವನ ಕೋಣೆಯನ್ನು ಪ್ರವೇಶಿಸಿದಳು. ಅಲ್ಲಿ ಹೋಗಿ ನೋಡುತ್ತಾಳೆ, ಎಂಕ್ಯಾಮಾವನು ನೆಲದ ಮೇಲೆ ಸತ್ತುಬಿದ್ದಿದ್ದನು! ಅವನ ಶವದ ಬಳಿಯಲ್ಲಿ ಒಬ್ಬ ಯುವಕನು ತನ್ನ ಕೈಯಲ್ಲಿ ಎಂಕ್ಯಾಮಾವನ ಆ ಪಿಸ್ತೂಲನ್ನು ಧರಿಸಿ ನಿಂತಿದ್ದನು! ಆ ಭಯನಕ ದೃಶ್ಯವನ್ನು ನೋಡಿದ ಬಳಿಕಂತೂ ಅವಳ ಮೈ ಮೇಲೆ ಎಚ್ಚರವೇ ಉಳಿಯಲಿಲ್ಲ. ಆಕೆಯು ಭಯಗ್ರಸ್ತ ದನಿಯಿಂದ ಆ ಯುವಕನನ್ನು ಕುರಿತು:—ನೀವು ನಮ್ಮ ಎಂಕ್ಯಾಮಾವನನ್ನೇಕೆ ಕೊಂದಿರಿ? ಎಂದು ಪ್ರಶ್ನ ಮಾಡಿದಳು.

"ಇಲ್ಲ. ನಾನು ಇಲ್ಲಿಗೆ ಬರುವ ಮೊದಲೇ ಇವನ ಕೊಲೆಯಾಗಿತ್ತು." ಎಂದಂದು ಆ ತರುಣನು ಸುಶೀಲೆಯ ಮುಖದ ಕಡೆಗೆ ಟಕಮಕ ನೋಡಹತ್ತಿದನು.

"ಹಾಗಾದರೆ ಆ ರಿವ್ಹಾಲ್ವರು ನಿಮ್ಮ ಕೈಯಲ್ಲೇಕೆ?" ಎಂದು ಅವಳು ಗದ್ದರಿಸಿ ಕೇಳಲು,

"ಬಾಯಿಊ, ನೀವು ಯಾರು? ಈ ಎಂಕ್ಯಾಮಾವನಿಗೂ ನಿಮಗೂ ಏನು ಸಂಬಂಧವಿದೆಯೆಂಬದು ನನಗೆ ಗೊತ್ತಿಲ್ಲ; ಆದರೆ ನಿಮ್ಮ ಮುಖಭಾವದಿಂದ ನೀವು ಶೀಲವಂತರೂ, ಸುವಿಚಾರಿಗಳೂ ಆಗಿರುತ್ತೀರೆಂಬದು ಸ್ಪಷ್ಟವಾಗಿ ತೋರುತ್ತದೆ. ಈಗ ನನ್ನ ಕೈಯಲ್ಲಿ ರಿವ್ಹಾಲ್ವರ ಇರುವದರಿಂದ ನಾನೇ ಎಂಕ್ಯಾಮಾವನ ಕೊಲೆ ಮಾಡಿದವನೆಂಬ ಅಪರಾಧ ಸಿದ್ಧವಾಗಲಿಕ್ಕೆ ಬೇರೆ ಆಧಾರಗಳ ಅವಶ್ಯಕತೆಯೇ ಇರುವದಿಲ್ಲ; ಆದರೆ ಬಾಯಿಊ, ನಾನು ಸತ್ಯವನ್ನು ಸ್ಮರಿಸಿ ಹೇಳುತ್ತೇನೆ, ಎಂಕ್ಯಾಮಾವನ ಕೊಲೆಮಾಡಿದವರಾರೆಂಬದು ನನಗೆ ಗೊತ್ತಿಲ್ಲ. ನಾನೂ ನಿಮ್ಮಷ್ಟೇ ನಿರಪರಾಧಿಯಿರುತ್ತೇನೆ" ಎಂದು ಆ ತರುಣನು ನುಡಿದನು.

"ಹಾಗಾದರೆ, ಈ ಕೊಲೆಯನ್ನು ಯಾರು ಮಾಡಿರಬಹುದೆಂದು ನಿಮಗನಿಸುತ್ತದೆ?"

"ನಾನದನ್ನು ಹೇಗೆ ಹೇಳಲಿ? ಕಳೆದ ಹನ್ನೆರಡು ವರ್ಷಗಳಿಂದ ಭೆಟ್ಟಿಯಾಗದ ನಾನು, ಇಂದು ಎಂಕ್ಯಾಮಾವನ ಭೆಟ್ಟಿಗಾಗಿ ಇಲ್ಲಿಗೆ ಬಂದೆನು. ಮನೆಯೊಳಗಿನ ಎಲ್ಲ ಆಳು-ಹೋಳುಗಳು ಮಲಗಿರುವರೆಂದು ಮನಗಂಡ ಬಳಿಕ ನಾನೀ ಕೋಣೆಯನ್ನು ಹೊಕ್ಕೆನು; ಆದರೆ ಆಗಲೆ ಎಂಕ್ಯಾಮಾವನು ಈ ಸ್ಥಿತಿಯಲ್ಲಿ ನನ್ನ ಕಣ್ಣಿಗೆ ಬಿದ್ದನು; ಇವನ ಕೊಲಿಮಾಡಿದವರಾರೆಂದು ಯೋಚಿಸುತ್ತ ಇತ್ತ ನೋಡಿದೆನು. ಇಲ್ಲಿ ಈ ರಿವ್ಹಾಲ್ವರ ಬಿದ್ದಿತ್ತು. ಇದನ್ನು ಮೇಲಿಕ್ಕೆತ್ತುತ್ತಿರಲು, ತುಂಬಿಟ್ಟಿದ್ದ ಗುಂಡುಗಳೊಳಗಿನ ಒಂದು ಗುಂಡು "ಠಬ್" ಎಂದು ಹಾರಿತು. ಸುದೈವದಿಂದ ಆ ಗುಂಡು ಕಿಟಕಿಯೊಳಗಿಂದ ಹೊರಗೆ ಹಾರಿತು. ಇಷ್ಟರಲ್ಲಿ ನೀವೂ ಇಲ್ಲಿಗೆ ಬಂದಿರಿ. ಇದಕ್ಕೂ ಹೆಚ್ಚು ಸಂಗತಿಯು ನನಗೆ ಗೊತ್ತಿರುವದಿಲ್ಲ."

"ಹಾಗಾದರೆ ಈಗ ನಾನೇನು ಮಾಡಬೇಕೆಂದು ನಿಮಗನಿಸುತ್ತದೆ?"

"ನಾನದನ್ನೇನು ಹೇಳಲಿ? ನಾನು ಪುನಃ ಪುನಃ ತಿಳಿಸುವದಿಷ್ಟೇ, ಎಂಕ್ಯಾಮಾವನನ್ನು ಕೊಂದವನು ನಾನಲ್ಲ; ಆದರೆ ಅವನ ಕೊಲೆಯ ಆರೋಪವು ನನ್ನ ಮೇಲೆ ಸಹಜವಾಗಿ ಹೊರುವಂತಿದೆ ಮನಸ್ಸು ಮಾಡಿದರೆ ಈ ಕ್ಷಣಕ್ಕೆ ನೀವು ನನ್ನನ್ನು ಪೋಲೀಸರಿಗೊಪ್ಪಿಸಿ, ನನ್ನನ್ನೇ ಕೊಲೆಗಾರನೆಂದು ತೋರಿಸಬಹುದಾಗಿದೆ. ನನ್ನ ನಿರ್ದೋಷತ್ವದ ಬಗ್ಗೆ ನಾನಾವ ಪುರಾವೆಯನ್ನೂ ಕೊಡಲಿಕ್ಕೆ ಸಾಧ್ಯವಿರುವದಿಲ್ಲ."

"ಹಾಗಾದರೆ, ಎಂಕ್ಯಾಮಾವನ ಭೆಟ್ಟಿಗಾಗಿ ನೀವು ಈ ಅಪರಾತ್ರಿಯಲ್ಲಿ ಮನೆಯಲ್ಲೆಲ್ಲರೂ ಮಲಗಿದ ಮೇಲೇಕೆ ಬಂದಿರಿ?"

"ನನ್ನ ಮಾತಿನ ಮೇಲೆ ವಿಶ್ವಾಸವಿಡುವಷ್ಟು ನಿಮ್ಮ ಮನಸ್ಸಿನ ಖಾತ್ರಿ

ಯಾಗಿದ್ದರೆ, ನಾನು ನನ್ನ ನಿಜಸಂಗತಿಯನ್ನು ನಿಮ್ಮ ಮುಂದೆ ಹೇಳುತ್ತೇನೆ"

"ಹೇಳಿರಿ. ನಿಮ್ಮ ಮುಖಭಾವದಿಂದ ನೀವು ಹೇಳುವದೆಲ್ಲವೂ ಸತ್ಯವಿರುವದೆಂದು ನನ್ನ ಮನೋದೇವತೆಯು ನನಗೆ ಸೂಚಿಸುತ್ತದೆ.''

ಬಾಯಿ, ನೋಡಿರಿ, ಸತ್ಯದ ಪ್ರಭಾವವೆಷ್ಟಿದೆಯೆಂಬದನ್ನು! ನಾನು ಯಾರು, ಎಲ್ಲಿಯವನು? ಎಂಬದು ಲೇಶಮಾತ್ರವೂ ಗೊತ್ತಿರದ ನೀವು, ಒಬ್ಬ ಅಪರಿಚಿತನ ಮಾತನ್ನು, ಅದರಲ್ಲಿ ಬೂದಿನಂತ ಪ್ರಕಾರದಲ್ಲಿ ವಿಶ್ವಾಸವಿಡುವದರಿಂದ ನೀವು ಸತ್ಯಶೀಲರಿರುವಿರೆಂಬ ಬಗ್ಗೆ ನನ್ನ ಸಂಪೂರ್ಣ ಖಾತ್ರಿಯಾಯಿತು. ಅಂತೇ ಸತ್ಯವು ಸತ್ಯದ ಗುರುತು ಮಾಡಿಕೊಟ್ಟಿತು. ನೀವು ಯಾರು? ನಿಮ್ಮ ಹೆಸರೇನು? ಮುಂತಾದ್ದು ನನಗೆ ತಿಳಿಯದು; ಆದರೆ ಎಂಕ್ಯಾಮಾವನನ್ನು ನಾನು ಕೊಲ್ಲದಿದ್ದರೂ, ಇವರ ಕೊಲೆಯಿಂದ ಇವರ ಎಲ್ಲ ಆಸ್ತಿಗೆ ನಾನೇ ಮಾಲೀಕನಾಗಿರುತ್ತೇನೆ. ನಾನಾರೂ ಪರಕೀಯನಿರದೆ, ಎಂಕ್ಯಾಮಾವನ ತಮ್ಮನ ಮಗನಾಗಿರುತ್ತೇನೆ ಆ ಇಬ್ಬರು ಅಣ-ತಮ್ಮಂದಿರಲ್ಲಿ ಸಖ್ಯವಿರದ್ದರಿಂದ ಈಗ ಹನ್ನೆರಡು ವರ್ಷಗಳಲ್ಲಿ ನನ್ನ ಇವರ ಭೆಟ್ಟಿಯಾಗಿರಲಿಲ್ಲ. ನನ್ನ ತಂದೆಯು ತೀರಿಕೊಂಡು ಒಂದು ವರ್ಷವಾಯಿತು. ನನ್ನ ತಂದೆಯ ಭಾಗದ ಎಷ್ಟೋ ಆಸ್ತಿಯನ್ನು ಈ ಎಂಕ್ಯಾಮಾವನು ಎಸ್ತಿಹಾಕಿದ್ದರಾದ್ದರಿಂದ, ಕಳೆದ ವರ್ಷದಿಂದ ನಾನಿವರಿಗೆ ಎಷ್ಟೋ ಪತ್ರಗಳನ್ನು ಬರೆದೆನು; ಆದರೆ ಇವರು ನನ್ನ ಒಂದು ಪತ್ರಕ್ಕೂ ಉತ್ತರ ಕೊಡಲಿಲ್ಲ ಆದರಿಂದ ಇವರನ್ನು ಪ್ರತ್ಯಕ್ಷವಾಗಿ ಕಂಡು, ಆ ಮಾತಿನ ನಿಷ್ಕರ್ಷ ಮಾಡಿಕೊಳ್ಳುವದಕ್ಕೆಂದು ನಾನು ಇಂದು ಇಲ್ಲಿಗೆ ಬಂದೆನು; ಆದರೆ........''

"ಇವರ ಭೆಟ್ಟಿಗೆ ಇಂಥ ಅಪರಾತ್ರಿಯಲ್ಲೇಕೆ ಬಂದಿರೆಂಬ ಪ್ರಶ್ನೆಯು ಉತ್ತರವನ್ನು ಕೊಡುವದಿಲ್ಲವೆ?''

"ಅದನ್ನೇ ಈಗ ಹೇಳುತ್ತೇನೆ. ಎಂಕ್ಯಾಮಾವನು ಸರಳ ಉತ್ತರಗಳನ್ನು ಕೊಡುವದಿಲ್ಲೆಂಬದನ್ನು ನಾನು ತಿಳಿದೇ ಇದ್ದೆನು. ಆ ಬಗ್ಗೆ ನನ್ನ-ಅವರಲ್ಲಿ ಭಯಂಕರವಾದ ವಾದವೇ ಏಳತಕ್ಕದ್ದಿತ್ತು; ಎಂಕ್ಯಾಮಾವನಂಥ ದೊಡ್ಡ ಮನುಷ್ಯನು ನನ್ನಂಥ ಕ್ಷುಲ್ಲಕ ಪೋರನ ಕೂಡ ವಾದಿಸ್ಯಾಡುವದು ಇವನ ಆಳು-ಹೋಳುಗಳ ಕಿವಿಗೆ ಕೇಳಿಸಬಾರದೆಂದು ಯೋಚಿಸಿಯೇ ನಾನು ಈ ಅಪರಾತ್ರಿಯಲ್ಲಿ ಇವರ ಭೆಟ್ಟಿಗೆಂದು ಕಳ್ಳನಹಾಗೆ ಈ ಕೋಣೆಯನ್ನು ಹೊಕ್ಕೆನು. ಹಾಗು ಇಲ್ಲಿ ನನಗೀ ಪ್ರಕಾರವು ಕಣ್ಣಿಗೆ ಬಿದ್ದಿತು''

"ನಿಮ್ಮ ಹೆಸರೇನು?"

"ನನಗೆ ಶ್ರೀಕಂಠನೆನ್ನುತ್ತಾರೆ. ನನ್ನ ತಂದೆ ಹಾಗು ಈ ಎಂಕ್ಯಾ

ಮಾವ ಇವರು ಸಹೋದರರು; ಆದರೆ ಬಾಯಿ, ಈ ವರೆಗೆ ನುಡಿದ ನನ್ನ ಮಾತನ್ನು ನೀವು ನಂಬುವಿರೋ?"

"ಒಂದೇ ಮಾತನ್ನು ಪುನಃ ಪುನಃ ಉಚ್ಚರಿಸುವ ಚಾಳಿಯು ನನಗಿಲ್ಲ. ಆ ಬಗ್ಗೆ ನಿಮಗೆ ಆಗಲೆ ಏನು ಹೇಳಿದೆನೋ, ಅದೇ ನನ್ನ ಕೊನೆಯುವರೆಗಿನ ಉತ್ತರವು."

"ನೀವು ಯಾರು? ಈಗ ಇಲ್ಲಿಗೇಕೆ ಬಂದಿರೆಂಬದನ್ನಷ್ಟು ತಿಳಿಸುವಿರಾ? ಹೀಗೆ ನಾನು ಪ್ರಶ್ನೆ ಮಾಡಿದ ಬಗ್ಗೆ ಕೋಪಗೊಳ್ಳಲಾರಿರಷ್ಟೇ?"

"ಇಂಥ ಸರಳ ಪ್ರಶ್ನೆಗಳಿಗೇಕೆ ಸಿಟ್ಟು ಬರಬೇಕು? ನಾನು ಕೇಳಿದ ಪ್ರಶ್ನೆಗಳಿಗೆಲ್ಲ ಸಂಕೋಚ ತಾಳದೆ ಉತ್ತರ ಕೊಟ್ಟು, ನಿಮಗೆ ನಿಮ್ಮ ಪ್ರಶ್ನೆಗಳ ಉತ್ತರಗಳನ್ನು ಕೊಡಲಿಕ್ಕೆ ನನಗೇಕೆ ಸಂಕೋಚವುಂಟಾಗಬೇಕು?" ಎಂದಂದು ಸುಶೀಲೆಯು ತನ್ನ ಆತ್ಮವೃತ್ತವನ್ನು ಅಚ್ಚುಕಟ್ಟಾಗಿ ಆ ಅಪರಿಚಿತನಿಗೆ ತಿಳಿಸಿದಳು; ಆದರೆ ಎಂಕ್ಯಾಮಾವನ ಅಸದ್ವರ್ತನದ ಒಂದು ಅಕ್ಷರವನ್ನು ಕೂಡ ಅವಳು ಅವನೆದುರಿಗೆ ತೆಗೆಯಲಿಲ್ಲ. ಸುಶೀಲೆಯ ಕರುಣಾಪೂರ್ಣ ಸಂಗತಿಯನ್ನು ಕೇಳಿ ಶ್ರೀಕಂಠನ ಕಂಠವು ದುಃಖದಿಂದ ಒತ್ತರಿಸಿತು. ಆಗ ಅವನು:—ಸುಶೀಲಾಬಾಯೀ, ಎಂಕ್ಯಾಮಾವನ ಕೊಲೆಯಿಂದ ನೀವು ಕೇವಲ ಆಶ್ರಯವಿಹೀನರಾದರೆಂದು ನಿಮ್ಮ ಭಾವನೆಯಾಗಿರಬಹುದು; ಆದರೆ ಯಾವ ಸತ್ಯಕ್ಕಾಗಿ ನೀವು ನನ್ನಲ್ಲಿ ಸಂಪೂರ್ಣವಾಗಿ ವಿಶ್ವಾಸವನ್ನಿಟ್ಟಿರುವಿರೋ, ಅದರ ಪ್ರತಿಫಲಕ್ಕಾಗಿ ದೇವರ ದಯೆಯಿಂದ ಈ ಕೊಲೆಯ ಶೋಧ ಹತ್ತಿ, ಎಂಕ್ಯಾಮಾವನ ಆಸ್ತಿಯೆಲ್ಲ ನನ್ನ ಸ್ವಾಧೀನವಾದರೆ, ಅದರ ಅರ್ಧಭಾಗವು ನಿಮ್ಮದಿದೆಯೆಂಬದನ್ನು ಖಂಡಿತವಾಗಿ ನಂಬಬೇಕೆಂದು ಸೂಚಿಸುತ್ತೇನೆ.

"ಬೇಡ; ಶ್ರೀಕಂಠರಾಯರೇ, ನನಗೆ ಎಂಕ್ಯಾಮಾವನ ಆಸ್ತಿಯ ಅಂಶವು ಕೂಡ ನನಗೆ ಬೇಡ; ನಾನದನ್ನೆಂದೂ ಇಚ್ಛಿಸುವದಿಲ್ಲ. ಅವರ ಅನಂತ ಉಪಕಾರದ ಹೊರೆಯೇ ನನ್ನ ಶಿರದ ಮೇಲೆ ಭಾರವಾಗಿದ್ದು, ಅದೇ ನನಗೆ ವಿಪುಲಸಂಪತ್ತಿನಂತೆ ತೋರುತ್ತಲಿದೆ. ಈ ಆಸ್ತಿಯ ಸಲುವಾಗಿ ನನಗೀಗ ದುಃಖವಾಗುವದಿಲ್ಲ. ಈ ನನ್ನ ಉದಾರ ಪಾಲಕನ ಕೊಲೆಯಾದ ಬಗ್ಗೆ ಅತ್ಯಂತ ದುಃಖವಾಗುತ್ತಿದೆ. ಈ ಕೊಲೆಯ ಪತ್ತೆಹಚ್ಚಿ. ಕೊಲೆಗಾರನಿಗೆ ತಕ್ಕ ಶಾಸನ ಮಾಡಿಸುವ ಕೆಲಸಕ್ಕಾಗಿ ಜೀವಹೋದರೂ ಚಿಂತೆಯಿಲ್ಲ; ಅದು ನನ್ನ ಪವಿತ್ರ ಹಾಗು ಇಷ್ಟ ಕರ್ತವ್ಯವೆಂತಲೇ ನಾನು ತಿಳಿಯುತ್ತೇನೆ. ಶ್ರೀಕಂಠರಾಯರೇ, ಎಲ್ಲ ಋಣಗಳಿಗಿಂತಲೂ ಅನ್ನದ ಋಣವು ವಿಶೇಷವಾಗಿರುತ್ತದೆ."

"ಬಾಯಿ, ಕೊಲೆಗಾರನ ಪತ್ತೆಹಚ್ಚುವದಕ್ಕಾಗಿ ಶಕ್ತಿಮೀರಿ ಹೆಣಗಿರಿ;

ಅನುಮಾನಪಡಬೇಡಿರಿ. ಆ ಕೆಲಸದಲ್ಲಿ ನಿಮಗೆ ನೆರವಾಗುವದು ನನ್ನ ಕರ್ತವ್ಯವೇ ಆಗಿದೆ; ಆದರೆ ಕೆಲಕಾರಣಗಳ ಮೂಲಕ ನಾನು ಇಲ್ಲಿರುವಂತಿಲ್ಲ. ಅದಕ್ಕಾಗಿ ನನ್ನನ್ನು ಕ್ಷಮಿಸಿರಿ. ಸುಶೀಲಾಬಾಯಿಊ, ಈ ಅವಸ್ಥೆಯಲ್ಲಿ ನಿಮ್ಮ ಹೊರತು ನನ್ನನ್ನಾದರೂ ನೋಡಿಲ್ಲವೆಂದೇ ನನ್ನ ಭಾವನೆಯಿದೆ; ಆದರೆ ಯಾರಾದರೂ ನನ್ನನ್ನು ಕಂಡಿದ್ದರೆ, ಹಾಗು ನನ್ನ ಗುರುತುಗಳನ್ನು ಅವರು ಲಕ್ಷದಲ್ಲಿಟ್ಟಿದ್ದರೆ ಮಾತ್ರ, ಈ ಕೊಲೆಯ ಸಂಸರ್ಗವು ನನಗೆ ನೋಂಕಬಹುದಾಗಿದೆ; ಆದರೆ ಅಂಥ ಪ್ರಸಂಗ ಬಂದರೆ ನೀವೇ ಸಾಕ್ಷಿದಾರರಾಗಿ, ನನ್ನ ಬಗ್ಗೆ ಏನು ಹೇಳಬೇಕಾದದ್ದನ್ನು ಹೇಳಿರಿ'' ಎಂದು ನುಡಿಯುತ್ತ ಶ್ರೀಕಂಠನು ದೀನಮುದ್ರೆಯಿಂದ ಸುಶೀಲೆಯ ಕಡೆಗೆ ನೋಡಿದನು.

"ಶ್ರೀಕಂಠರಾಯರೇ, ನೀವಿನ್ನು ನಿಶ್ಚಿಂತರಾಗಿರ್ರಿ"

"ಹಾಗಾದರೆ ನಾನಿನ್ನು ಹೊರಡುತ್ತೇನೆ. ಇನ್ನು ಮೇಲೆ ತೀವ್ರವಾಗಿಯೇ-೧-೨ ದಿನಗಳಲ್ಲೇ ನಾನು ನಿಮಗೆ ಭೆಟ್ಟಿಯಾಗುತ್ತೇನೆ."

"ಆದರೆ ಈಗ ಈ ಕೊಲೆಯ ಬಗ್ಗೆ ನಾನೇನು ಮಾಡಬೇಕು?"

"ಈ ರಿವ್ಹಾಲ್ವರದ 'ಠಬ್' ಎಂಬ ಶಬ್ದವನ್ನು ಕೇಳಿಯೂ ಈ ಮನೆಯ ಆಳು-ಹೊಳುಗಳಾರೂ ಏಳದಿರುವದು ಆಶ್ಚರ್ಯಕರವಲ್ಲವೆ?"

"ತೊಗಲಬಾವಲಿ, ನಿಶಾಚರ ಹಕ್ಕಿ ಮುಂತಾದ ಪಕ್ಷಿಗಳು ಇರುಳಲ್ಲಿ ಪೇರಲು ಹಣ್ಣು ತಿನ್ನಲಿಕ್ಕೆ ಬರುತ್ತಿರುವದರಿಂದ, ಆ ಬದಿಗಿನ ತೋಟದವನು ಆಗಾಗ್ಗೆ ಹೀಗೆ ಹುಸಿಗುಂಡು ಹಾರಿಸುತ್ತಿರುತ್ತಾನೆ. ಹಾಗೆಯೇ ಈ ದಿನವೂ ಹಾರಿಸಿರಬಹುದೆಂದು ಬಗೆದು ಅವರು ಎದ್ದಿರಲಿಕ್ಕಿಲ್ಲವಷ್ಟೇ?"

"ಹಾಗಾದರೆ ನಾನು ಇಲ್ಲಿಂದ ಹೊರಟು ಹೋದ ಬಳಿಕ ನೀವು ನಿಮ್ಮ ಆಳುಗಳನ್ನು ಎಬ್ಬಿಸಿ, ಪೋಲೀಸರಿಗೆ ಈ ಕೊಲೆಯ ಸುದ್ದಿಯನ್ನು ತಿಳಿಸಿರಿ, ಅಂದರೆ ಪೋಲೀಸ ವಿಚಾರಣೆಗೆ ಪ್ರಾರಂಭವಾಗಿ, ನಿಮಗೂ ತೊಂದರೆಯಾಗಲಿಕ್ಕಿಲ್ಲ;" ಎಂದಂದು ಶ್ರೀಕಂಠನು ಹೊರಡಲನುವಾದನು. ಆಗ ಅವರಿಬ್ಬರೂ ಒಬ್ಬರ ಕಡೆಗೊಬ್ಬರು ಎವೆಯಿಕ್ಕದೆ ನೋಡುತ್ತ ಕ್ಷಣಹೊತ್ತು ನಿಂತುಕೊಂಡರು. ಆ ಉಭಯತರಲ್ಲಿ ಆಗ ಯಾವ ಯಾವ ವಿಚಾರಗಳುಂಟಾದವೆಂಬದು ಈಗಲೇ ಖಂಡಿತವಾಗಿ ಹೇಳಬರುವಂತಿಲ್ಲ; ಎದುರಿಗೆ ಎಂಕ್ಯಾಮಾವನ ಪ್ರೇತವು ಭಯಾನಕಸ್ಥಿತಿಯಲ್ಲಿ ಬಿದ್ದುಕೊಂಡಿದ್ದರೂ, ಅವರೀರ್ವರ ಹೃದಯಗಳು ಆಗಲೊಂದು ಮಹತ್ವದ ವಿಚಾರದಲ್ಲಿ ಲೀನವಾಗಿದ್ದವೆಂದು ತಿಳಿಸಿದರೆ ತಪ್ಪಾಗದು. ಅವರೀರ್ವರ ಮನಸ್ಸಿನಲ್ಲಿ ಆಗ ಅಂಕುರಿತವಾದ ಬೀಜವು ಮೊಳಕೆಯೊಡೆಯದೆ ಉಳದೀತೆ?

ಶ್ರೀಕಂಠನು ಸುಶೀಲೆಯು ಕಡೆಗೆ ತಿರುತಿರುಗಿ ನೋಡುತ್ತ ಅಲ್ಲಿಂದ ಹೊರಟು ಹೋದನು. ಅವನು ಕಣ್ಣು ಮರೆಯಾದ ಬಳಿಕ ಒಮ್ಮೆ ನಿಟ್ಟುಸಿರ್ಗರೆದು, ಸುಶೀಲೆಯು ಕೆಳಗೆ ಬಂದಳು. ಇಷ್ಟೊತ್ತಾದರೂ ಒಬ್ಬ ಆಳೂ ಎದ್ದಿರಲಿಲ್ಲ. ಆಗ ಅವಳು ಅವರನ್ನೆಲ್ಲ ಕೂಗಿ ಎಬ್ಬಿಸಿ, "ಅಟ್ಟದ ಮೇಲೆ ಯಾತರದೋ 'ಠಪ್' ಎಂದು ಸಪ್ಪಳವಾದಂತೆ ಭಾಸವಾದ್ದರಿಂದ ನಾನು ನನ್ನ ಕೋಣೆಯಿಂದ ಎದ್ದು ಬಂದೆನು; ಮೇಲೆ ಹೋಗಿ ನೋಡಿ ಬರ್ರಿ" ಎಂದು ಹೇಳಿಕಳಿಸಿದಳು.

ಮೇಲೆ ಹೋದವರು ಎಂಕ್ಯಾಮಾವನ ಕೊಲೆಯಾದ ದುಷ್ಟವಾರ್ತೆಯನ್ನು ಕೂಗುತ್ತಲೇ ಕೆಳಗಿಳಿದರು. ಅದನ್ನು ಕೇಳಿ ಎಲ್ಲ ನೌಕರರೂ ಹೆದರಿದರು. ಕೂಡಲೆ ಇಬ್ಬರನ್ನು ಪೋಲೀಸರ ಕಡೆಗೆ ಕಳಿಸಿ, ಸುಶೀಲೆಯು ಉಳಿದವರೊಡನೆ ಎಂಕ್ಯಾಮಾವನ ಕೋಣೆಯ ಕಡೆಗೆ ನಡೆದಳು. ರಾಜಧಾನಿಯ ಪೋಲೀಸರಿಗೆ ಎಂಕ್ಯಾಮಾವನ ಖೂನಿನ ಸುದ್ದಿ ಹತ್ತಿದ ಕೂಡಲೆ, ಇನ್ಸಪೇಕ್ಟರ, ಸಬ್‌ಇನ್ಸಪೇಕ್ಟರ, ಜಮಾದಾರ ಮುಂತಾದ ಅಮಲ್‌ದಾರರೂ, ೧೦-೮ ಪ್ಯಾದೆಗಳೂ ಬಂದರು. ಅವರು ಆ ಬಂಗಲೆಯೊಳಗಿನ ನೌಕರ-ಚಾಕರರನ್ನು ಹೊರಗೆ ಹೋಗಗೊಡದೆ ವಿಚಾರಣೆಯು ನಡೆಯಿತು. ಸುಶೀಲೆಯನ್ನು ಒತ್ತಟ್ಟಿಗೆ ಬರಮಾಡಿಕೊಂಡು ಇನ್ಸಪೇಕ್ಟರನು ಅವಳಿಗೇನೇನೋ ಕೇಳಿದನು; ಆದರೂ ಆ ಮಾವನ ಕೊಲೆಯ ವಿಷಯವಾಗಿ ಸಂಧಾನವೇನೂ ಹತ್ತಲಿಲ್ಲ. ಮರುದಿನ ಜ್ಯೂರಿಗಳನ್ನು ಕೂಡಿಸಿ, ಎಂಕ್ಯಾಮಾವನಿಗೆ ಯಾವದೊಂದು ಶಸ್ತ್ರಾಘಾತದಿಂದಲೇ ಮರಣವುಂಟಾಯಿತೆಂದು ನಿಶ್ಚಯಿಸಿ, ಪ್ರೇತದ ವ್ಯವಸ್ಥೆಯನ್ನು ಮಾಡಿದರು; ಆದರೆ ಕೊಲೆಯ ಪತ್ತೆಯಾದ ಹೊರತು ಯಾರೂ ಬಂಗಲೆ ಬಿಟ್ಟು ಹೋಗಕೂಡದೆಂದು ಆ ಬಂಗಲೆಯೊಳಗಿನ ನೌಕರ-ಚಾಕರರಿಗೂ, ಸುಶೀಲಾಬಾಯಿಗೂ, ಪೋಲೀಸರು ತಿಳಿಸಿದರು.

---

## ೮ನೇ ಮೆಟ್ಟಲು—ನಾಮಧಾರಿ ಶ್ರೀಕಂಠ.

ಎಂಟು ದಿನಗಳಾದರೂ ಎಂಕ್ಯಾಮಾವನ ಕೊಲೆಯ ಪತ್ತೆ ಹತ್ತಲಿಲ್ಲ. ಪೋಲೀಸರು ಪಂಚರ ಮುಖಾಂತರ ಎಂಕ್ಯಾಮಾವನ ಎಲ್ಲ ಕಪಾಟು-ಪೆಟ್ಟಿಗೆಗಳನ್ನು ತೆರೆದು, ಅವನ ಖೂನಿಗೆ ಸಂಬಂಧವಾದ ಏನಾದರೂ ಕಾಗದ-ಪತ್ರಗಳು ಸಿಗುವವೇನೆಂಬ ಬಗ್ಗೆ ಶೋಧಿಸಿದರು. ಕಡೆಗೆ ಅವರು ಅವನ ಎಲ್ಲ ಜಂಗಮ ಆಸ್ತಿಯನ್ನು ಆ ಬಂಗ್ಲೆಯ ಮೇಲಂತಸ್ತಿನ ಒಂದು ಭದ್ರವಾದ ಕೋಣೆಯಲ್ಲಿರಿಸಿ, ಅದಕ್ಕೆ ಕೀಲಿ-ಮುದ್ರೆಗಳನ್ನು ಹಾಕಿದರು; ಹಾಗು ಸುಶೀಲೆಗೆ ಅದೇ ಬಂಗ್ಲೆಯ

ಕೆಳಗಿನ ಭಾಗದಲ್ಲಿ ಇರಲಿಕ್ಕೆ ತಿಳಿಸಿದರು. ಎಂಕ್ಯಾಮಾವನ ಮರಣದನಂತರ ತಾನು ಆ ಬಂಗ್ಲೆಯಲ್ಲಿರಬಾರದೆಂದು ಸುಶೀಲೆಗೆ ಅನಿಸಹತ್ತಿದ್ದು ಸ್ವಾಭಾವಿಕವು; ಆದರೆ ಕೊಲೆಯ ಸಂಶಯದಿಂದ ಪೋಲೀಸರು ಅವಳನ್ನು ಕೆಲದಿನ ಬೇರೆ ಕಡೆಗೆ ಹೋಗದಂತೆ ಕಟ್ಟು ಮಾಡಿದರು. ಪೋಲೀಸ ಅಮಲ್ದಾರರು ಆಗಾಗ್ಗೆ ಬಂದು ಆಕೆಯ ಸಮಾಚಾರ ತಕೊಳ್ಳುತ್ತಿದ್ದರು. ಎಂಕ್ಯಾಮಾವನ ಕೊಲೆಯಿಂದ ಸುಶೀಲೆಯ ಮನಸ್ಸು ಕೇವಲ ಉದಾಸೀನವಾಗಿದ್ದರೂ, ಶ್ರೀಕಂಠನ ನೆನಪಾದಾಗೆಲ್ಲ-ಅವನ ಸತ್ಯನಿಷ್ಠಮೂರ್ತಿಯು ಕಣ್ಣೆದುರಿಗೆ ನಿಂತಾಗೆಲ್ಲ ಅವಳಿಗೊಂದು ಪ್ರಕಾರದ ನವಜೀವನದ ಸ್ಫೂರ್ತಿಯೇ ಉಂಟಾಗುತ್ತಿತ್ತು; ಹಾಗು ಆ ಸದ್ಗೃಹಸ್ಥನನ್ನು ಮತ್ತೆ ಯಾವಾಗ ಕಾಣುವೆನೋ ಎಂದು ಆತುರಳಾಗುತ್ತಿದ್ದಳು. ಹೀಗೆ ಅವಳು ೪-೬ ದಿನಗಳನ್ನು ಆ ಬಂಗ್ಲೆಯಲ್ಲಿ ಏಕಾಕಿನಿಯಾಗಿ ಕಳೆಯುತ್ತಿರಲು, ಒಂದು ದಿನ ಮಧ್ಯಾಹ್ನದಲ್ಲಿ ಎಂಕ್ಯಾಮಾವನ ಗುಮಾಸ್ತನೊಬ್ಬನು ಬಂದು, ಒಂದು ತಂತಿಯ ಕಾಗದವನ್ನು ಅವಳಿಗೊಪ್ಪಿಸಿ:—ಸುಶೀಲಾಬಾಯಿಯವರೇ, ಎಂಕ್ಯಾಮಾವನ ತಮ್ಮನ ಮಗನಾದ ಶ್ರೀಕಂಠನೆಂಬವನು ಇಂದು ನಿಮ್ಮ ಭೆಟ್ಟಿಗೆ ಬರುತ್ತಾನಂತೆ, ಎಂದು ತಿಳಿಸಿದನು. ಕೂಡಲೆ ಅವಳು ಆ ತಂತಿಯ ಕಾಗದವನ್ನು ಓದಿಕೊಂಡಳು. ಆ ಸತ್ಯನಿಷ್ಠ ಶ್ರೀಕಂಠನ ಭೇಟಿಯು ಪುನಃ ಇಂದು ಆಗುವದಲ್ಲ, ಎಂಬ ಸಂತೋಷದಿಂದ ಈ ವರೆಗಿನ ಅವಳ ತೇಜೋವಿಹೀನ ಮುಖದ ಮೇಲೆ ಕಳೆಯೇರಿತು. ಕಾರಕೂನನು ಹೊರಟು ಹೋದ ಮೇಲೆ ಆ ತಂತಿಯ ಕಾಗದವನ್ನು ಅವಳು ಪುನಃ ಪುನಃ ಓದಿದಳು. ಎಷ್ಟು ಸಾರೆ ಓದಿದರೂ ಅವಳ ಮನಸ್ಸಿನ ತಳಮಳವು ಶಾಂತವಾಗಲಿಲ್ಲ. ಕಡೆಗೆ ಅವಳು ಅದನ್ನು ಮೇಜಿನ ಮೇಲಿಟ್ಟು, ತನ್ನ ಎಡಗೈ ಅಂಗೈಯ ಮೇಲೆ ಗದ್ದವನ್ನೂರಿ ಕುಳಿತು ವಿಚಾರಗ್ರಸ್ತಳಾದಳು. "ಆ ಗೃಹಸ್ಥನು ಎಂಕ್ಯಾಮಾವನ ತಮ್ಮನ ಮಗನೇ ಇರಲಿ, ಮತ್ತಾವನೇ ಇರಲಿ; ಅವನಂತೂ ಶೀಲವಂತ-ಸತ್ಯವಂತನಾಗಿ ತೋರುತ್ತಾನೆ. ಎಂಕ್ಯಾಮಾವನ ಖೂನಾದ ಕಾಲಕ್ಕೆ ಅವನ ಕೈಯಲ್ಲಿ ರಿವ್ಹಾಲ್ವರ ಇತ್ತಾದರೂ ಅವನ ಆಗಿನ ಮುಖಭಾವ, ಸತ್ಯಸಂಧಾನ, ಮಿತಭಾಷಣ ಮುಂತಾದವುಗಳಿಂದ ಅವನು ಕೊಲೆಗಾರನಲ್ಲವೆಂದೇ ನನ್ನ ಖಾತ್ರಿಯಾಗಿರುವದು. ದೇವಾ, ಪರಮೇಶ್ವರಾ, ಎಂಕ್ಯಾಮಾವನ ಕೊಲೆಯಾದದ್ದು ಅತ್ಯಂತ ಗರ್ಹ್ಯ ಕೃತ್ಯವಾಗಿದ್ದರೂ, ಅದರಿಂದ ಈ ಸುಶೀಲೆಯ ಮೇಲೆ ಒಂದು ಬಗೆಯ ಇಷ್ಟ ಪರಿಣಾಮವೇ ಆಗಿರುತ್ತದೆ! ಯಾವ ದೇವರ ದಯೆಯಿಂದ ನನ್ನ ಮೇಲಿನ ಆ ಅರಿಷ್ಟವು ನಿವಾರಣವಾಯಿತೋ, ಅದೇ ದೇವರ ಕೃಪಾಬಲದಿಂದ ಆ ಸದ್ಗೃಹಸ್ಥ ಶ್ರೀಕಂಠರಾಯರ ಮೇಲೆ ಆ ಖೂನಿನ ಆರೋಪವು ಹೊರದೆ, ನಾನು ಅವರ

ಪಪರಿನಲ್ಲಿ ಬೀಳುವಂತಾಗಬೇಕು. ಇಷ್ಟೇ ನನ್ನ ಪ್ರಾರ್ಥನೆಯು..........."

ಹೀಗೆ ಸುಶೀಲೆಯು ಕಣ್ಣು ಮುಚ್ಚಿಕೊಂಡು ದೇವರನ್ನು ಕುರಿತು ಏಕೋಭಾವದಿಂದ ಬೇಡಿಕೊಳ್ಳುತ್ತಿರಲು, ಒಬ್ಬ ದಾದಿಯು ಧಾವಿಸುತ್ತ ಬಂದು:— ಅಪ್ಪನವರೇ, ಹೊರಗೆ ಮೋಟಾರಿನಲ್ಲಿ ಎಂಕ್ಯಾಮಾವನ ತಮ್ಮನ ಮಕ್ಕಳು ಬಂದಿರುವರು, ಎಂದು ತಿಳಿಸಿದಳು. ಆ ಕೂಡ ನಗೆ ಮೊಗದಿಂದ ಅವಳು ಹೊರಗೆ ಬಂದು ಬಾಗಿಲ ಬಳಿಯಲ್ಲಿ ನಿಂತಿದ್ದ ಮೋಟಾರಿನ ಒಳಗೆ ಹೋದಳು; ಆದರೆ ಮೋಟಾರಿನಿಂದ ಇಳಿದ ವ್ಯಕ್ತಿಯು ತನ್ನ ಪೂರ್ವಪರಿಚಿತ ಸದ್ಗೃಹಸ್ಥನಲ್ಲೆಂಬದು ಕೂಡಲೆ ಅವಳ ಮನವರಿಕೆಯಾಯಿತು. ವಯಸ್ಸು, ರೂಪ, ಮುಖಚರ್ಯೆ ಮುಂತಾದ ಬಾಹುಲಕ್ಷಣಗಳಿಂದ ಅವನು ಆ ಮೊದಲಿನ ಗೃಹಸ್ಥನಂತೆ ತೋರಿದರೂ, ಅವನ ನಗೆ, ಮಾತಿನ ಬಗೆ, ನಡಿಗೆಯ ಠೀವು ಇತ್ಯಾದಿಗಳು ಅವನಂತಿರಲಿಲ್ಲ. ಆದರಿಂದ ಅವಳಲ್ಲಿ ಆ ಮೊದಲು ಉಂಟಾಗಿದ್ದ ಆದರ-ಉಲ್ಲಾಸಗಳೆಲ್ಲ ಮಾಯವಾದವು ತಾನಾಗಿ ಮನೆಗೆ ಬಂದ ಗೃಹಸ್ಥನನ್ನು ಒಮ್ಮೆಲೆ ಅನಾದರಿಸುವದು ನಮ್ಮ ಹಿಂದುಗಳ ಶೀಲವಾಗಿಲ್ಲ. ತನ್ನ ಕಡು ವೈರಿಯಾಗಿದ್ದರೂ ಅವನು ತಾನಾಗಿ ಬಂದರೆ, ಅವನನ್ನು ಆದರಿಸುವದೇ ನಮ್ಮ ಹಿಂದುಗಳ ಪ್ರಾಚೀನಕಾಲದಿಂದಲೂ ನಡೆದು ಬಂದ ರೀತಿಯಾಗಿದೆ. ಈ ನಿಯಮಕ್ಕನುಸರಿಸಿ ಸುಶೀಲೆಯು ಅವನನ್ನು ಬಂಗ್ಲೆಯೊಳಗೆ ಕರೆದೊಯ್ದು ಒಂದು ಖುರ್ಚಿಯ ಮೇಲೆ ಕೂರಿಸಿದಳು.

ಬಂದ ಗೃಹಸ್ಥನು ಒಳ್ಳೇ ಸಂಭಾವಿತನದ ಆವಿರ್ಭಾವವನ್ನು ತೋರುತ್ತಿದ್ದರೂ, ಅವನ ಅಂತಃಕರಣದೊಳಗಿನ ತಾಮಸೀವೃತ್ತಿಯು ಅವನ ಪ್ರತಿಯೊಂದು ಆಚರಣೆಯಲ್ಲಿ ಸೂಕ್ಷ್ಮವಾಗಿ ತಲೆ ಎತ್ತುತ್ತಲೇ ಇದ್ದಿತು. ಒಳಗೆ ಹೋಗಿ ಸ್ಥಾಪನಾಪನ್ನನಾದನಂತರ ಆತನು ಒಳ್ಳೇ ಗಂಭೀರದನಿಯಿಂದ:— ಸುಶೀಲೆ, ನನ್ನ ಬಗ್ಗೆ ನಿನಗೆ ಈ ವರೆಗೆ ಯಾವ ಸಂಗತಿಯೂ ಗೊತ್ತಿರದ್ದರಿಂದ ಹೀಗೆ ಆಕಸ್ಮಿಕವಾಗಿ ಬಂದ ನನ್ನನ್ನು ನೋಡಿ ನೀನು ಚಕಿತಳಾಗಿರಬಹುದು; ಆದರೆ ನನ್ನ ವಿಷಯವಾಗಿ ನೀನು ನಿನ್ನ ಮನಸ್ಸಿನಲ್ಲಿ ಎಳ್ಳಷ್ಟೂ ಸಂಶಯಪಡಬೇಡ. ಎಂಕ್ಯಾಮಾವನ ತಮ್ಮನ ಮಗನಾದ ಶ್ರೀಕಂಠರಾಯನೆಂಬುವವನು ನಾನೇ. ಇತ್ತೀಚೆಗೆ ಕೆಲವರ್ಷ ನಾನು ಶಿಲೋನದಲ್ಲಿ ದೊಡ್ಡ ಪಗಾರದ ದಂಡಿನ ಅಮಲ್‌ದಾರನಿರುತ್ತೇನೆ. ಮೊನ್ನೆ ವರ್ತಮಾನಪತ್ರಗಳ ಮುಖಾಂತರ ನಮ್ಮ ಎಂಕ್ಯಾಮಾವನ ಕೊಲೆಯ ವರ್ತಮಾನವು ನನಗೆ ಹತ್ತಿತು. ಆ ಕೂಡಲೆ ನಿನ್ನ ಹೆಸರಿಗೆ ತಂತಿಕೊಟ್ಟು ಅಲ್ಲಿಂದ ಹೊರಟೆನು. ನಮ್ಮ ಎಂಕ್ಯಾಮಾವನಂತಹ ಸುಪ್ರಸಿದ್ಧ ಗೃಹಸ್ಥನ ಕೊಲೆಯ ಸುಳುವು ಪೋಲೀಸರಿಗೆ ಇದೂ ವರೆಗೂ ಹತ್ತ

ದಿಕುವದಕ್ಕೆ ಈ ಮೈಸೂರ ಸರಕಾರದ "ಏನಯ್ಯಾ ಸ್ವಾಮಿ" ಪೋಲೀಸರ ಹೇಡಿತನವೇ ಕಾರಣವೆಂದು ನನ್ನ ಭಾವನೆಯಾಗಿರುತ್ತದೆ; ಆದರೆ ಅವರಿಂದ ಆ ಕೆಲಸವಾಗದಿದ್ದರೂ ಈ ಕ್ಯಾಪ್ಟನ್ ಶ್ರೀಕಂಠನು ಅದನ್ನು ಅಲ್ಪ ವೇಳೆಯಲ್ಲೇ ಪತ್ತೆ ಹಚ್ಚದೆ ಬಿಡನು; ಕೊಲೆಗಾರನು ಪಾತಾಳದಲ್ಲಿ ಅಡಗಿಕೊಂಡಿದ್ದರೂ ಅವನನ್ನು ಹಿಡಿದೆಳೆದು ತರುವೆನು."

"ನೀವು ಎಂಕ್ಯಾಮಾವನ ನಿಜವಾದ ಸಂಬಂಧಿಕರೇ ಆಗಿದ್ದರೆ ಅವರ ಕೊಲೆಯ ಪತ್ತೆ ಹಚ್ಚಲಿಕ್ಕೆ ಕೊಂಚವೂ ವಿಲಂಬ ಮಾಡಲಾಗದು" ಎಂದು ಸುಶೀಲೆಯು ಮಾರ್ಮಿಕ ಶಬ್ದಗಳನ್ನುಚ್ಚರಿಸಿದಳು.

"ಸುಶೀಲೇ, ಆ ಕೆಲಸವಂತೂ ನನ್ನದೇ; ಆದರೆ ನಿನಗೆ ನನ್ನ-ಎಂಕ್ಯಾಮಾವನ ಸಂಬಂಧದ ಬಗ್ಗೆ ಸಂಶಯವೇಕೆ ಬಂದಿತು? ಅವರ ನನ್ನ ಸಂಬಂಧಕ್ಕೆ ನೀನು ನಡುವೆ "ರೆ" ಎಂಬಸಂಶಯ ಸೂಚಕ ಪ್ರತ್ಯಯವನ್ನೇಕೆ ಹಚ್ಚಿದೆ? ಸುಶೀ, ನಾನು ನಿಜವಾದ ಸಂಬಂಧಿಕನಾಗಿರದೆ ನನ್ನನ್ನು ಯಾವನೊಬ್ಬ ವೇಷಧಾರಿಯೆಂದು ನೀನು ತಿಳಿದಿರುವಿಯಾ?

"ಛೀ-ಛೀ, ಹಾಗೇನೂ ಇಲ್ಲ." ಎಂದು ತುಟಿ ಕಚ್ಚುತ್ತ ಸುಶೀಲೆಯು ನುಡಿದಳು.

"ಹಾಗಾದರೆ ಸುಶೀ, ಬಾ ಇತ್ತ; ಕೂಡಿಲ್ಲಿ ನನ್ನ ಹತ್ತರ; ಹಾಗು ಆ ಕೊಲೆ ಎಂದು, ಯಾವಾಗ, ಯಾವ ಸ್ಥಿತಿಯಲ್ಲಾಯಿತೆಂಬದನ್ನು ನನಗೆ ಸವಿಸ್ತಾರವಾಗಿ ತಿಳಿಸು."

ಸುಶೀಲೆಯು ನಿಂತಲ್ಲಿಯೇ ನಿಂತುಕೊಂಡು ಎಂಕ್ಯಾಮಾವನ ಕೊಲೆಯನ್ನು ಸ್ವಲ್ಪದರಲ್ಲಿ ಚನ್ನಾಗಿ ವಿವರಿಸಿ ಹೇಳಿದಳು; ಹಾಗು ಎಂಕ್ಯಾಮಾವನಿಗೆ ತಾನು ಸಾಕುಮಗಳಾಗಬೇಕೆಂಬದನ್ನು ಅರುಹಿ, ಅಲ್ಲಿಂದ ಹೊರಟು ಹೋಗಬೇಕೆಂದಿದ್ದ ತನ್ನ ವಿಚಾರ ಅವನಿಗೆ ತಿಳಿಸಿದಳು.

"ಸುಶೀಲಾಬಾಯಿ, ನಿನ್ನ ವಿಷಯದ ಸಂಪೂರ್ಣಮಾಹಿತಿಯು ನನಗಿದೆ; ಹಾಗು ನಮ್ಮ ದೊಡ್ಡಪ್ಪನ-ಎಂಕ್ಯಾಮಾವನ ಹೆಂಡತಿಯ-ಇಚ್ಛೆಯೂ ನನಗೆ ತಿಳಿದಿಲ್ಲವೆಂತಲ್ಲ; ಆದುದರಿಂದ ಈ ವರೆಗೆ ನನ್ನ-ನಿನ್ನಲ್ಲಿಯ ಯಾವ ಸಂಬಂಧ ವಿರದಿದ್ದರೂ ಅಂಥ ಸಂಬಂಧವನ್ನುಂಟುಮಾಡಲಿಕ್ಕೆ ಎಷ್ಟು ತಡ ಹಿಡಿದೀತು? ನಾನು ಬಂದೆನೆಂದು ನೀನು ಇಲ್ಲಿಂದ ಹೊರಡುವ ಅವಶ್ಯಕವಿಲ್ಲ. ನಿನ್ನನ್ನು ಪ್ರತ್ಯಕ್ಷ ನೋಡುವದಕ್ಕಿಂತ ಮೊದಲು, ನಾನು ನನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದಕಿಂತ ಹೆಚ್ಚು ನೂರಾರು ಪಟ್ಟು ಅಧಿಕವಾದ ಅನುಕೂಲಗ್ರಹವು ನಿನ್ನ ವಿಷಯವಾಗಿ ನಿನ್ನನ್ನು ನೋಡಿದ ಬಳಿಕ ಆಗಿರುತ್ತದೆ. ಸುಶೀ, ಈ ಬಂಗ್ಲೆಯು

ನಿನ್ನದೇ ಇದೆ. ಎಂಕ್ಯಾಮಾವನ ಆಸ್ತಿಗೆ ನಿಜವಾದ ವಾರಸಾದಾರನು ಇನ್ನು ಮೇಲೆ ನಾನೇ ಆಗುತ್ತಿದ್ದರೂ ನೀನು ಆ ಬಗ್ಗೆ ಯತ್ಕಿಂಚಿತ್ತೂ ಸಂಕೋಚ ಪಡಬೇಡ. ನಿನ್ನ ಸಹಾಯವಿರದಿದ್ದರೆ ಅವನದೆಲ್ಲ ಆಸ್ತಿಯು ನನ್ನ ವಶಕ್ಕೆ ಬರಲಾರದೆಂದು ನನ್ನ ಭಾವನೆಯಾಗಿದೆ ''

"ನೀವು ಎಂಕ್ಯಾಮಾವನ ವಾರಸಾದಾರರೇ ಆಗಿದ್ದರೆ, ಅವನ ಆಸ್ತಿಯನ್ನು ವಶಮಾಡಿಕೊಳ್ಳಲಿಕ್ಕೆ ನನ್ನಂಥವಳ ನೆರವು ನಿಮಗೇತಕ್ಕೆ ಬೇಕು? ನೀವು ಬಂದದ್ದರಿಂದ ಇಲ್ಲಿಂದ ನನ್ನ ಬಿಡುಗಡೆಯಾಯಿತು. ನಾಳಿನಿಂದ ನಾನಿ ಬಂಗ್ಲೆಯನ್ನು ಬಿಟ್ಟು ಬೇರೆ ಕಡೆಗೆ ಇರಲಿಕ್ಕೆ ಹೋಗುತ್ತೇನೆ"

"ಬೇಡ, ನೀನಾಗಿ ಹೋಗಹತ್ತಿದರೂ ನಾನು ನಿನ್ನನ್ನು ಹೋಗಗೊಡಲಿಕ್ಕಿಲ್ಲ. ಎಂಕ್ಯಾಮಾವನ ಆಕಸ್ಮಿಕಮರಣದಿಂದ ನನಗುಂಟಾದ ದುಃಖಪ್ರಸಂಗದಲ್ಲಿ ನಿನ್ನಂಥವಳ ಮಧುರಸಹವಾಸವಿರದಿದ್ದರೆ, ಈ ಶೋಕಾವೇಗದಿಂದ ನನಗೆ ಹುಚ್ಚು ಹಿಡಿದೀತು."

'ಇಂಥಹ ಅಸಂಬದ್ಧಪ್ರಲಾಪಗಳನ್ನು ಕೇಳಿಕೊಳ್ಳುವ ರೂಢಿಯು ನನಗಿಲ್ಲ.'

"ಸುಶೀ, ನನ್ನ ಸ್ವಭಾವಪರಿಚಯವು ನಿನಗಿರದ್ದರಿಂದ ನೀನು ನನ್ನ ವಿಷಯವಾಗಿ ಇಷ್ಟು ಸಾಶಂಕಿತಳಾಗಿರುತ್ತೀ. ಯಾವದೊಂದು ಸಂಗತಿಯು ಅನುಭವ ಹೊಂದಿದ ಬಳಿಕೇ ಅದರ ಬಗ್ಗೆ ಅಭಿಪ್ರಾಯಪಡಬೇಕು. ಅದಿರಲಿ, ನಾನೀಗ ಪೋಲೀಸಕಚೇರಿಗೆ ಹೋಗಿ ಬರುತ್ತೇನೆ. ಸಂಜೆಗೆ ನಾವೀರ್ವರೂ ಮೋಜಿನಿಂದ ಮಾತಾಡುತ್ತ ಕಾಲಕಳೆಯೋಣವಂತೆ!" ಎಂದೆಂದು ಆ ತರುಣನು ಆ ಬಂಗ್ಲೆಯಿಂದ ಹೊರಗೆ ಬಂದು ಮೋಟಾರನ್ನು ಹತ್ತಿ ನಡೆದನು.

ಎಂಕ್ಯಾಮಾವನ ಕಾಟದಿಂದ ಪಾರಾಗುವಷ್ಟರಲ್ಲಿ ದೇವರು ತನಗಾಗಿ ಇವನನ್ನು ಎಲ್ಲಿಂದ ನಿರ್ಮಾಣ ಮಾಡಿರುವನೋ ಎಂದು ಆಲೋಚಿಸುತ್ತ ಸುಶೀಲೆಯು ಪುನಃ ತನ್ನ ಕೋಣೆಗೆ ಹೋದಳು. ಎಂಕ್ಯಾಮಾವನ ತಮ್ಮನ ಮಗನೆಂದು ಹೇಳಿದ ಆ ಗೃಹಸ್ಥನು ಶ್ರೀಕಂಠನೋ? ಇವನು ಶ್ರೀಕಂಠನೋ? ಎಂಬ ಪ್ರಶ್ನೆಯು ಅವಳಲ್ಲಿ ಪುನಃ ಪುನಃ ಉದ್ಭವಿಸಹತ್ತಿತು. ಮೊದಲಿನವನು ಶ್ರೀಕಂಠನಿರಲಿ-ಇರದಿರಲಿ; ಅವನ ಮಾತನ್ನು ನಂಬಬೇಕೆಂದು ಅವಳಿಗೆ ಅನಿಸಿದರೆ, ಈಗ ಬಂದವನು ಎಂಕ್ಯಾಮಾವನ ಪ್ರತ್ಯಕ್ಷ ತಮ್ಮನ ಮಗನು. ಇವನನ್ನು ನಂಬಲಾಗದೆಂದು ಅವಳ ದೃಢಭಾವನೆಯಾಯಿತು. ಇವನ ಪ್ರತಿಯೊಂದು ಶಬ್ದದಲ್ಲಿ ಡಾಂಭಿಕತನವೇ ಅವಳಿಗೆ ತೋರಹತ್ತಿತು. ಇನ್ನು ಇಲ್ಲಿ ಕ್ಷಣ ಸಹ ಇರದೆ, ಇಲ್ಲಿಂದ ಹೊರಡಬೇಕೆಂದು ಅವಳು ನಿಶ್ಚಯಿಸಿದಳು; ಹಾಗು ಅದಕ್ಕಾಗಿ ಅವಳು ಆ ಉಪವನದಲ್ಲಿ ಕಾಲಿಟ್ಟಳು.

ಇಷ್ಟರಲ್ಲಿ ಒಬ್ಬ ಬಡ ಹುಡುಗನು ಬಂದು ಅವಳ ಕೈಗೊಂದು ಚೀಟಿಯನ್ನು ಕೊಟ್ಟು, "ಎಚ್ಚರ-ಎಚ್ಚರ! ಬಹು ಎಚ್ಚರ!!" ಎಂದು ಹೇಳಿ ಓಡಿ ಹೋದನು. ಸುಶೀಲೆಯು ಆ ಹುಡುಗನ ಕಡೆಗೆ ನೋಡದೆ, ಆ ಚೀಟಿಯ ಮಡಿಕೆಗಳನ್ನು ಬಿಚ್ಚಿ ಓದಲಾರಂಭಿಸಿದಳು. ಅದರಲ್ಲಿ ಹೀಗೆ ಬರೆದಿತ್ತು:—

"ಸುಶೀಲಾಬಾಯಿ, ನಾನು ನಿಮ್ಮ ಬಂಗ್ಲೆಯ ಎಡ-ಬಲಗಳಲ್ಲಿಯೇ ಇರುತ್ತಿರುವೆನು. ಈಗ ನಿಮ್ಮ ಬಂಗ್ಲೆಯಲ್ಲಿ ಏನೇನು ನಡೆದಿದೆಯೆಂಬದು ನನಗೆ ಗೊತ್ತಾಗಿರುತ್ತದೆ. ಇಂದು ರಾತ್ರಿ ೯ಗಂಟೆಗೆ ಈ ಉಪವನದ ದಿಡ್ಡಿಯ ಬಾಗಿಲ ಹತ್ತರ ಬರಿ. ಅಲ್ಲಿ ನಾನು ನಿಮ್ಮ ದಾರೀ ಕಾಯುತ್ತ ಕುಳಿತಿರುತ್ತೇನೆ. ಇತಿ ನಿಮ್ಮ ಶ್ರೀಕಂಠ"

ಆ ಚೀಟಿಯ ವಾಚನ ಮುಗಿದ ಕೂಡಲೆ, ಸುಶೀಲೆಯು ಅದನ್ನು ಹರಿದು ಚೂರು ಚೂರಾಗಿ ಮಾಡಿದಳು; ಹಾಗು ಆ ಉಪವನದೊಳಗಿನ ಒಂದು ಕುರ್ಚಿಯ ಮೇಲೆ ಕುಳಿತು ವಿಚಾರಮಾಡಹತ್ತಿದಳು. ಆಗ ನಿಜವಾದ ಶ್ರೀಕಂಠ ನೆಂಬುವವನು ಈ ಚೀಟಿ ಕಳಿಸಿದವನೇ ಎಂಬದು ಅವಳಿಗೆ ಖಾತ್ರಿಯಾಯಿತು; ಹಾಗು ಆತನ ಭೆಟ್ಟಿಗಾಗಿ ರಾತ್ರಿಯಲ್ಲಿ ಹೋಗುವದನ್ನು ಅವಳು ಗೊತ್ತುಮಾಡಿ ಕೊಂಡಳು. ಅಂದು ಹೊಸದಾಗಿ ಮೋಟಾರಿನಿಂದ ಬಂದಿದ್ದ ಶ್ರೀಕಂಠನೆಂಬ ನಾಮಧಾರಿಯ ವಿಷಯವಾಗಿ ಅವಳಿಗೆ ಅಂಜಿಕೆಯುಂಟಾಗಿತ್ತು; ಆದರೂ ಅವ ಳೇನೂ ಅಷ್ಟು ಅಪ್ಪಾಳಿಯಾಗಿರಲಿಲ್ಲ. ಅಂಥ ಪ್ರಸಂಗವೇ ಬಂದರೆ ಕೆಲಕಾಲದ ವರೆಗಾದರೂ ಆತ್ಮಸಂರಕ್ಷಣ ಮಾಡಿಕೊಳ್ಳುವಷ್ಟು ಧೈರ್ಯ-ಸಾಹಸಗಳು ಅವಳಲ್ಲಿ ಒಡೆದು ಕಾಣುತ್ತಿದ್ದವು.

ಸುಶೀಲೆಯು ಬಂಗ್ಲೆಗೆ ಬಂದು ರಾತ್ರಿಯ ೯ರ ದಾರಿ ಕಾಯುತ್ತಿದ್ದಳು. ಬರಬರುತ್ತ ಕತ್ತಲೆಗವಿಯಿತು; ಆದರೂ ಆ ನಾಮಧಾರಿ ಶ್ರೀಕಂಠನ ಮೋಟಾರು ಬರಲಿಲ್ಲ. ಮುಂದೆ ಕೆಲಹೊತ್ತಿನ ಮೇಲೆ ಅವಳು ದೃಷ್ಟಿಯು ಗಡಿಯಾರದ ಕಡೆಗೆ ಹೊರಳಿತು. ಕೂಡಲೆ ಅವಳು ಚಟಕ್ಕನೆದ್ದು ತನ್ನ ಕೋಣೆಯ ಹೊರಗೆ ಬಂದಳು. ಅಷ್ಟರಲ್ಲಿ ಆ ನಾಮಧಾರಿಯು ಹೊರಗಿನಿಂದ ಬಂದು ಅವಳೆದು ರಿಗೆ ದೊತ್ತೆಂದು ನಿಂತುಕೊಂಡು-ಸುಶೀ, ತಡವಾಗಿ ಬಂದುದಕ್ಕಾಗಿ ನನ್ನ ಮೇಲೆ ಸಿಟ್ಟಾಗಿಲ್ಲವಷ್ಟೇ? ನಡೆ, ನಾವೀರ್ವರೂ ತುಸ ಹೊತ್ತು ಆ ಉಪವನದಲ್ಲಿ ಮಾತಾಡುತ್ತ ಕೂಡ್ರೋಣ, ಎಂದವನೇ, ಅವನು ಅವಳ ಕೈ ಹಿಡಿದನು.

"ಹೀಗೆ ಪರಸ್ತ್ರೀಯರ ಕೈ ಹಿಡಿಯಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ?" ಎಂದು ಕ್ರೋಧಸಂತಪ್ತಳಾಗಿ ನುಡಿಯುತ್ತ, ಸುಶೀಲೆಯು ಒಮ್ಮೆ ಝಾಡಣಿ ಹೊಡೆದು ಅವನ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಂಡಳು.

“ನಿನ್ನನ್ನು ನಾನು ಪರಸ್ತ್ರೀಯೆಂದು ತಿಳಿದಾಗಲ್ಲವೆ ಆ ಮಾತು? ನೀನಂತೂ ಇನ್ನು ಈ ಬಂಗ್ಲೆಯ ಮಾಲಿಕಳಾಗತಕ್ಕವಳು; ಆದ್ದರಿಂದ ನಿನಗೆ ಪರಸ್ತ್ರೀಯೆಂದು ಅನ್ನುವವರಾದರೂ ಯಾರು?”

“ರಾಯರೇ, ನೀವು ಎಂಕಣ್ಣಾಮಾವನ ವಾರಸಾದಾರರೇ ಇರ್ರಿ, ಬೇರೆ ಯಾರೇ ಇರ್ರಿ; ನಿಮ್ಮ ಈ ಹುಡುಗಾಟಿಕೆಯು ನನಗೆ ಸೇರುವದಿಲ್ಲ. ನೀವೊಳ್ಳೆ ದೊಡ್ಡ ಮನುಷ್ಯರೆನಿಸಿಕೊಳ್ಳುತ್ತೀರಿ; ಮತ್ತು ಹೀಗೆ ಪರಸ್ತ್ರೀಯ ಕೈ ಹಿಡಿಯುತ್ತೀರಿ. ಈಬಗ್ಗೆ ನಿಮಗೇನೆನಬೇಕೋ ತಿಳಿಯದಾಗಿದೆ. ಸಾಯಿರಿ, ಹಿಂದಕ್ಕೆ ನನ್ನೆದುರಿಗೆ ಕೂಡ ನಿಲ್ಲದೆ ಇಲ್ಲಿಂದ ಹೊರಟುಹೋಗಿರಿ” ಎಂದು ಗದ್ದರಿಸಲು,

“ಸಂಕೋಚದ ಸೀಮೆಯನ್ನು ದಾಟುವಾಗ ಈ ತರದ ತುಸ ಗೊಂದಲವು ಆಗತಕ್ಕದ್ದೇ. ಸುಶೀ, ಬಾ, ಇತ್ತ ಬಾ” ಎಂದನನೇ ಆತನು ಮತ್ತೆ ಅವಳ ಕೈ ಹಿಡಿಯಲು ಮುಂದರಿದನು. ಆ ಕೂಡಲೆ ಅವಳು ಅವನನ್ನು ಒಳ್ಳೇ ಕಸುವಿನಿಂದ ದೂಡಲು, ಅವನು ಏಳೆಂಟು ಹೆಜ್ಜೆ ಹಿಂದೆ ಸರಿಯಬೇಕಾಯಿತು. ಆ ಸಮಯದಲ್ಲಿ ಸುಶೀಲೆಯು ತನ್ನ ಕೋಣೆಯನ್ನು ಪ್ರವೇಶಿಸಿದಳು; ಹಾಗು ಒಳಗಿನಿಂದ ಬಾಗಿಲವನ್ನಿಕ್ಕಿ ಚಿಲಕ-ಕೊಂಡಿಗಳನ್ನು ಹಾಕಿದಳು. ಇಷ್ಟಾಗ. ವಷ್ಟರಲ್ಲಿ ೯ಕ್ಕೆ ಐದೇ ನಿಮಿಷಗಳುಳಿದವು. ಹೇಗಾದರೂ ಮಾಡಿ ೯ಕ್ಕೆ ಉಪವನದ ಹೊರಗೆ ಹೋಗಿ ಶ್ರೀಕಂಠರಾಯನನ್ನು ಕಾಣಬೇಕೆಂಬ ಹಂಬಲವು ಅವಳಲ್ಲಿನ್ನೂ ಜಾಗ್ರತವಾಗಿತ್ತು; ಆದರೆ ಕೋಣೆಯ ಬಾಗಿಲ ತೆರೆದು ಹೊರಗೆ ಬರುವ ಬಗೆ ಹೇಗೆ? ಮುಂದೇನು ಮಾಡಬೇಕೆಂಬದನ್ನು ಯೋಚಿಸುವಷ್ಟರಲ್ಲಿ ಅವಳಿಗೊಂದು ಹಂಚಿಕೆಯು ತಿಳಿಯಿತು. ತನ್ನ ಕೋಣೆಯ ಉಪವನದ ಕಡೆಯ ಕಿಟಕಿಗಳಿಗೆ ಸಲಾಕಿಗಳಿರದ್ದು ಅವಳ ಲಕ್ಷ್ಯಕ್ಕೆ ಬಂದಿತು ಆ ಕೂಡಲೆ ಅವಳು ಆ ಕಿಟಕಿಯ ಬಾಗಿಲ ತೆರೆದು ಮೆಲ್ಲನೆ ಹೊರಗೆ ಹಣಿಕಿ ಹಾಕಿದಳು; ಹಾಗು ಒಮ್ಮೆಲೆ ಕಿಟಕಿಯೊಳಗಿಂದ ಹೊರಗೆ ಜಿಗಿದಳು. ಅಲ್ಲಿಂದ ಅವಳು ಸಮೀಪದಲ್ಲಿಯೇ ಇದ್ದ ಆಳುಮಗನ ಮನೆಗೆ ಹೋದಳು. ಅಲ್ಲಿಯ ಒಬ್ಬ ಮುದುಕಿಯು ಸುಶೀಲೆಯನ್ನು ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಅವಳ ಕಿವಿಯಲ್ಲಿ ಏನೇನೋ ಹೇಳಿ, ತನ್ನ ಸಂಕೇತದ ಸ್ಥಳಕ್ಕೆ-ಉಪವನದ ದಿಡ್ಡಿಯ ಬಾಗಿಲಿಗೆ ಹೋದಳು ಅಲ್ಲಿಯ ಒಂದು ಮರದ ಕೆಳಗೆ ಯಾರೋ ಅಡಗಿಕೊಂಡು ನಿಂತಿರುವಂತೆ ಅವಳಿಗೆ ಭಾಸವಾಯಿತು. ಸುಶೀಲೆಯು ಸಮೀಪಿಸುತ್ತಲೆ ಆ ಮನುಷ್ಯನು ಅವಳ ಕೈ ಹಿಡಿದು ಮೆಲ್ಲಗೆ:—ಸುಶೀಲಾಬಾಯಿ, ನಾವು ಇನ್ನೂ ಸ್ವಲ್ಪ ದೂರ ಹೋಗಬೇಕು. ಅಂದರೇ ನಿರ್ಭಯತನದಿಂದ ಮಾತು-ಕಥೆಯಾಡಲಿಕ್ಕೆ ಅನುಕೂಲವಾದೀತೆಂದು ನುಡಿದು ನಡೆದನು. ಸುಶೀಲೆಯು ಅವನ

ಕೈಯೊಳಗಿನ ತನ್ನ ಕೈಯನ್ನು ಬಿಡಿಸಿಕೊಳ್ಳಲಿಕ್ಕೆ ಯತ್ನಿಸಲಿಲ್ಲ. ಅವಳು ಅವ ನೊಡನೆ ಸುಮ್ಮನೆ ಸಾಗಿದಳು.

ಅವರೀರ್ವರೂ ಕೆಲ ನಿಮಿಷ ನಡೆದು ಬಂದು ಗಿಡದ ಕೆಳಗೆ ನಿಂತುಕೊಂಡರು. ಆಗ ಆ ಮನುಷ್ಯನು ಸುಶೀಲೆಯನ್ನು ಕುರಿತು:— ನನ್ನ ಚೀಟಿಯು ಬೊಬ್ಬಾಟವಾಗದಂತೆ ನಿಮ್ಮ ಕೈಗೆ ಹೇಗೆ ಬಿದ್ದೀತೋ ಎಂಬ ಬಗ್ಗೆ ನನಗೆ ಸಂಶಯವಿತ್ತು. ಅದು ಮುಟ್ಟಿ, ನೀವು ವೇಳೆಗೆ ಸರಿಯಾಗಿ ಬಂದದ್ದಕ್ಕಾಗಿ ನನಗೊಳ್ಳೇ ಆನಂದವಾಗಿರುತ್ತದೆ.

"ತಮ್ಮ ಚೀಟಿಯು ನನ್ನ ಕೈಗೆ ಸಿಗುವ ವರೆಗೆ ಪುನಃ ನಿಮ್ಮ ಭೇಟಿಯಾದೀತೆಂಬ ಭರವಸೆಯು ನನಗಿರಲಿಲ್ಲ"

"ಸುಶೀಲಾಬಾಯಿ, ಸತ್ಯಾಸತ್ಯಗಳ ನಿರ್ಣಯುವಾಗುವ ವರೆಗೆ ನಾವು ತೊಂದರೆಗೀಡಾಗಬೇಕಾಗಿದೆ. ಇಂದು ಇಷ್ಟು ರಾತ್ರಿಯಲ್ಲಿ ಭೇಟಿಗಾಗಿ ನಿಮ್ಮನ್ನು ಕರೆದ ನನ್ನ ಉದ್ದೇಶದ ಕಲ್ಪನೆ ಕೂಡ ನಿಮಗಿರಲಿಕ್ಕಿಲ್ಲ"

"ಅದರ ಅನುಭವವು ನನಗೂ ಬಂದಿದೆ ಆ ಬಂಗ್ಲೆಯಲ್ಲಿ ಪುನಃ ಕಾಲಿಡುವದೆಂದರೆ ತುಸ ಕಠಿಣ ಕೆಲಸವೇ ಸರಿ; ಆದರೆ ಶ್ರೀಕಂಠರಾಯರೇ, ಇಂದು ಈ ಬಂಗ್ಲೆಗೆ ಯಾವನೋ ಒಬ್ಬ ತರುಣನು ಬಂದಿದ್ದು, ತಾನೇ ಎಂಕ್ಯಾಮಾವನ ತಮ್ಮನಮಗ ಶ್ರೀಕಂಠನೆಂದು ಹೇಳುತ್ತಾನೆ. ಅವನ ಸ್ಥಿತಿಗತಿಗಳ ಮೇಲಿಂದ ಅವನು ಯಾವನೊಬ್ಬ ನಿಷ್ಣಾತ ಠಕ್ಕನಾಗಿರಬಹುದಾಗಿದೆ. ಇಂದು ನಾನು ಈ ಬಂಗ್ಲೆಯನ್ನು ಬಿಟ್ಟು ಎಲ್ಲಿಯಾದರೂ ಹೋಗತಕ್ಕವಳೇ; ಆದರೆ ಅಷ್ಟರಲ್ಲಿ ನಿಮ್ಮ ಚೀಟಿಯು ಬಂದದರಿಂದ ನಿಂತಿರುವೆನು."

"ಅವನು ಬರತಕ್ಕವನಿದ್ದಾನೆಂಬುದು ನನಗೆ ತಿಳಿದ ಕೂಡಲೆ ನೀವು ಆ ಬಂಗ್ಲೆಯಲ್ಲಿರಬಾರದೆಂದು ನಿಮಗೆ ನಾನು ಸೂಚಿಸತಕ್ಕವನು ಆದರೆ......"

"ಶ್ರೀಕಂಠರಾಯರೇ, ಅವನಾರು? ಮತ್ತು ಅವನಿಗಾಗಿ ನೀವು ಇಷ್ಟು ಅಂಜುವದೇಕೆ?"

"ಬಾಯಿ, ಅವನೊಬ್ಬ ನೀಚನು; ಆದರೆ ಎಂಕ್ಯಾಮಾವನ ವಾರಸಾ ಹಕ್ಕಿಗೆ ಸಂಬಂಧಿಸಿದ ನನ್ನ ಎಲ್ಲ ಮಹತ್ವದ ಕಾಗದ-ಪತ್ರಗಳು ಅವನ ಕೈಸೇರಿವೆ. ಅವುಗಳ ಆಧಾರದಿಂದ ತಾನೇ ಎಂಕ್ಯಾಮಾವನ ನಿಜವಾದ ಮಾಲೀಕನೆಂದು ಸಿದ್ಧಮಾಡಿಕೊಳ್ಳಲು ಅವನು ಯತ್ನಿಸುತ್ತಿರುವನು."

"ನಿಮ್ಮ ಆ ಮಹತ್ವದ ಕಾಗದ-ಪತ್ರಗಳು ಅವನಂಥ ದುಷ್ಟನ ಕೈಸೇರಿದ ದೇಕೆ?"

"ನಾನೂ ಅವನೂ ಕೂಡಿ ಸಿಲೋನದಲ್ಲಿರುವಾಗ ನಾನು ಜಡ್ಡಿನಿಂದ

ಮಲಗಿರಲು, ಅವನು ನನ್ನ ಮಹತ್ವದ ಕಾಗದ ಪತ್ರಗಳನ್ನು ಎತ್ತಿಹಾಕಿಕೊಂಡು ಹಿಂದುಸ್ತಾನಕ್ಕೆ ಓಡಿ ಬಂದನು. ಆಗ ನಾನು ಅತ್ಯವಸ್ಥಸ್ಥಿತಿಯಲ್ಲಿದ್ದದರಿಂದ, ನಾನು ಜೀವದಿಂದುಳಿದೇನೆಂಬ ಭರವಸೆಯು ಯಾರಿಗೂ ಇರಲಿಲ್ಲ; ಮತ್ತು ಅದಕ್ಕಾಗಿಯೇ, ನಾನು ಸತ್ತಿರುವೆನೆಂದೇ ಅವನ ಕಲ್ಪನೆಯಾಗಿ ಅವನು ಈ ಉದ್ಯೋಗ ನಡಿಸಿರುತ್ತಾನೆ.''

''ಹಾಗಾದರೆ ಅವನು ನಿಮ್ಮ ಎಲ್ಲ ಆಸ್ತಿಯನ್ನು ನುಂಗಿಬಿಡುವದಿಲ್ಲವೇ?''

''ಸುಶೀಲಾಬಾಯಿ, ಆ ದುಷ್ಟ ಶಿತಿಕಂಠನು ಮಹಾ ನೀಚನಿರುವದರಿಂದ ಅವನ ದುರಾಚರಣೆಯ ಕಲ್ಪನೆಯು ಕೂಡ ಅನ್ಯರಿಗೆ ಬರಲಿಕ್ಕಿಲ್ಲ. ಅತನನ್ನು ನನ್ನ ಬೆನ್ನಿಲೆ ಬಿದ್ದ ತಮ್ಮನೆಂದು ನಾನು ತಿಳಿಯುತ್ತಿದ್ದೆನು. ಅವನ ಸಲುವಾಗಿ ನಾನು ಏನೇನು ಮಾಡಿರುವೆನೋ ಅದೆಲ್ಲವೂ ಆ ಸರ್ವವ್ಯಾಪಿ ಪರಮಾತ್ಮನಿಗೊಬ್ಬನಿಗೇ ಗೊತ್ತಿದೆ ಹೀಗಿದ್ದರೂ ನಾನು ಜಡ್ಡಿನಿಂದ ಹಾಸಿಗೆ ಹಿಡಿಯಲು, ಆ ನೀಚನು ನನ್ನ ಪೆಟ್ಟಿಗೆಯೊಳಗಿನ ಮಹತ್ವದ ಎಲ್ಲ ಕಾಗದ-ಪತ್ರಗಳನ್ನು ಎತ್ತಿಕೊಂಡು ಓಡಿ ಹೋದನು. ಆ ಪರದೇಶದಲ್ಲಿ ನನ್ನ ಶುಶ್ರೂಷೆಯನ್ನಾರು ಮಾಡಬೇಕು? ಒಬ್ಬ ದಯಾವಂತ ಬಡ ಒಕ್ಕಲಿಗನ ಕುಟುಂಬದವರು ನನ್ನ ಹೊಟ್ಟೆ-ನೆತ್ತಿಗಳನ್ನು ನೋಡಿ ಚೆನ್ನಾಗಿ ಆರೈಕೆ ಮಾಡಿ, ನನ್ನನ್ನು ಆ ವ್ಯಾಕ್ಯುಮುಖದಿಂದ ಉಳಿಸಿದರು. ಅವರು ನನ್ನ ಕಡೆಗೆ ದಯಾಪೂರ್ಣದೃಷ್ಟಿಯಿಂದ ನೋಡದಿದ್ದರೆ, ಈ ವರೆಗೆ ನಾನು ಯಾವ ಲೋಕದೊಳಗಿನ ಯಾವ ಯೋನಿಯಲ್ಲಿ ಜನ್ಮ ತಾಳುತ್ತಿದ್ದೆನೋ ಯಾರು ಹೇಳಬೇಕು?''

''ಆ ನಾಚಿಕೆಗೇಡಿಯು ನನ್ನೊಡನೆಯೂ ಕುಸ ಅಸಭ್ಯತನದಿಂದಲೇ ವರ್ತಿಸಿದನು; ಆದರೆ ನಾನು ಅವನಿಗೆ ಅಂಜಲಿಲ್ಲ.''

''ಸುಶೀಲಾಬಾಯಿ ಈಗ ಅದಿರಲಿ. ನಾವು ಈಗ ಮಾಡತಕ್ಕ ಕೆಲಸಗಳು ಎರಡಿವೆ. ಅವೆರಡೂ ಅಷ್ಟೇ ಮಹತ್ವದವಿರುತ್ತವೆ. ಎಂಕ್ಯಾಮಾವನನ್ನು ಕೊಲೆ ಮಾಡಿದವನ ಪತ್ತೆ ಹಚ್ಚುವದು ಮೊದಲನೇ ಕೆಲಸವು; ಹಾಗು ಆ ನೀಚ ಶಿತಿಕಂಠನಲ್ಲಿರುವ ನನ್ನ ಕಾಗದ-ಪತ್ರಗಳನ್ನು ಸಂಪಾದಿಸುವದು ಎರಡನೇ ಕೆಲಸವು ಶಿತಿಕಂಠನು ಆ ಕಾಗದ-ಪತ್ರಗಳನ್ನೆಲ್ಲ ತನ್ನ ಟ್ರಂಕಿನಲ್ಲೇ ಇಟ್ಟಿರಲಿಕ್ಕೆ ಬೇಕು. ಇಂದು ಅವನು ಆ ಟ್ರಂಕನ್ನು ಬಹುಶಃ ನಿಮ್ಮ ಕೋಣೆಯಲ್ಲೇ ಇಟ್ಟಿರಬಹುದಾಗಿದೆ. ಆದ್ದರಿಂದ ನೀವು ಸಾಹಸ ಮಾಡಿದರೆ ನನ್ನ ಕೆಲಸವಾಗುವದು ಖಂಡಿತವು.''

''ಅಹುದು. ಆ ನೀಚನು ಬಂಗ್ಲೆಗೆ ಬಂದಕೂಡಲೆ ತನ್ನ ಟ್ರಂಕನ್ನು ನನ್ನ ಕೋಣೆಯೊಳಗೆ ನನ್ನ ಪಲ್ಲಂಗದ ಕೆಳಗೇ ಸರಿಸಿಟ್ಟಿರುತ್ತಾನೆ.''

"ಬಹಳ ಚೆನ್ನಾಯಿತು. ಇಂದು ಮಧ್ಯರಾತ್ರಿಯಲ್ಲಿ ಯಾರ ಕಣ್ಣಿಗೂ ಬೀಳದ ಹಾಗೆ ನನ್ನನ್ನು ನಿಮ್ಮ ಕೋಣೆಗೆ ಕರೆದೊಯ್ಯುವಿರಾ? ನನ್ನ ಭಾವೀ ಸುಖ-ದುಃಖದ ಸಂಪೂರ್ಣ ಭಾಗವು ಈ ನಿಮ್ಮ ಸಾಹಸದಲ್ಲಿಯೇ ಒಟ್ಟುಗೂಡಿರುತ್ತದೆ. ಇಂದು ಆ ಕೆಲಸವಾಗದಿದ್ದರೆ, ನಾಳೆ ಬೆಳಿಗ್ಗೆ ಅವನು ಆ ಕಾಗದ-ಪತ್ರಗಳ ಮುಖಾಂತರ ತಾನೇ ಎಂಕ್ಯಾಮಾವನ ನಿಜವಾದ ವಾರಸದಾರನೆಂದು ಸಾಧಿಸಿಕೊಳ್ಳುತ್ತಾನೆ. ತದನಂತರ ಅವುಗಳಿಂದೇನೂ ಪ್ರಯೋಜನವಾಗುವದಿಲ್ಲ."

"ಶ್ರೀಕಂಠರಾಯರೇ, ನಾನು ಹೇಗಾದರೂ ಮಾಡಿ ನಿಮ್ಮನ್ನು ಅವನ ಟ್ರಂಕಿನ ಬಳಿಗೆ ಒಯ್ದು ಬಿಟ್ಟರೂ, ಅದರ ಕೀಲಿ ಮುರಿದು ತೆಗೆಯುವಾಗ ಸಪ್ಪಳವಾಗಿ ಅವನು ಎಚ್ಚತ್ತರೆ? —

ಆ ಚಿಂತೆಯು ನಿಮಗೆ ಬೇಡ. ಆ ಟ್ರಂಕಿನ ಕೀಲಿಯನ್ನು ಹೇಗೆ ತೆಗೆಯಬೇಕೆಂಬದು ನನಗೆ ಚನ್ನಾಗಿ ಗೊತ್ತಿದೆ; ಅಲ್ಲದೆ ಇಗೋ ನೋಡಿರಿ, ಅದರ ಇನ್ನೊಂದು ಕೈಯು ನನ್ನಲ್ಲೇ ಇದೆ. ಸಿಲೋನದಲ್ಲಿರುವಾಗ ಅದಕ್ಕೆ ಎರಡು ಕೀಲಿಕೈಗಳಿದ್ದು, ಒಂದು ಅವನಲ್ಲಿ, ಒಂದು ನನ್ನಲ್ಲಿ ಇರುತ್ತಿದ್ದವು. ಬರುವಾಗ ಆತನು ನನ್ನ ಜನಿವಾರದೊಳಗಿನ ಕೈಯನ್ನು ಬಿಚ್ಚಿ ತರಲಿಕ್ಕೆ ಮರೆತು, ನನಗೊಂದು ಉಪಕಾರವನ್ನೇ ಬಗೆದಿರುತ್ತಾನೆ. ಟ್ರಂಕಿನ ಕೀಲೀ ತೆಗೆಯುವಾಗ ಅವನು ಎಚ್ಚತ್ತು ನಮ್ಮ ಬಳಿಗೆ ಬಂದರೆ ಆಗ ನಾನವನಿಗೆ ಚೆನ್ನಾಗಿ ಕೈತೋರಿಸದೆ ಬಿಡಲಾರೆನು. ನಾನಾಗಿ ಅವನ ಮೇಲೆ ಏರಿ ಹೋಗದೆ, ಕಾಯಿದೆಯಿಂದಲೇ ಸಹಜವಾಗಿ ಸಾಧಿಸಬಹುದಾದ ಕಾರ್ಯ ಸಾಧಿಸಿ, ನಂತರ ಅವನ ಸಮಾಚಾರ ತಕ್ಕೊಳ್ಳಬೇಕೆಂದು ನನ್ನ ಬೇತಾಗಿರುತ್ತದೆ"

ಇದನ್ನೆಲ್ಲ ಕೇಳಿ ಸುಶೀಲೆಯು ಕ್ಷಣಕಾಲ ಸುಮ್ಮನಾದಳು. ನಂತರ ಅವಳು:—ಶ್ರೀಕಂಠರಾಯರೇ, ನಾನು ಇಲ್ಲಿಗೆ ಬಂದ ಸುದ್ದಿಯು ಹೆರವರಿಗಾರಿಗೂ ತಿಳಿಯಬಾರದೆಂದು ಕಿಟಕಿಯೊಳಗಿಂದ ಪಾರಾಗಿ ಬಂದಿರುತ್ತೇನೆ. ಆದುದರಿಂದ ಈಗ ಆ ನೀಚನು ಬಂಗ್ಲೆಯಲ್ಲಿರುವನೋ ಇಲ್ಲವೋ ಎಂಬದನ್ನು ಹೇಳಲು ಸಾಧ್ಯವಿಲ್ಲ. ಅದು ಹೇಗೆಯೇ ಇರಲಿ, ನಾವು ಬಹು ಎಚ್ಚರಿಕೆಯಿಂದ ನಡೆಯಬೇಕು. ಈ ನಿಮ್ಮ ಕೆಲಸಕ್ಕಾಗಿ ಮಧ್ಯರಾತ್ರಿಯ ಕಾಲವು ತಕ್ಕದ್ದಾಗಿಲ್ಲ. ಯಾಕಂದರೆ, ಆಗ ಬೆಳದಿಂಗಳು ಬಿದ್ದಿರುತ್ತದೆ. ಅದರಿಂದ ನಾವು ಯಾರ ಕಣ್ಣಿಗಾದರೂ ಬೀಳುವ ಸಂಭವವದೆ; ಆದ್ದರಿಂದ ನೀವು ಈಗಲೇ ನನ್ನೊಡನೆ ನಡೆಯಿರಿ. ಆ ಕಿಟಕಿಯೊಳಗಿಂದಲೇ ನಾವೀರ್ವರೂ ನನ್ನ ಕೋಣೆಯನ್ನು ಪ್ರವೇಶಿಸೋಣ. ಅಂದರೆ ಯಾರಿಗೂ ನಮ್ಮ ವಿಷಯವಾಗಿ ಸಂಶಯ ವುಂಟಾಗಲಾರದು.

"ಸುಶೀಲಾಬಾಯಿ, ಇಷ್ಟು ಸಾಹಸವು ನಿಮ್ಮಿಂದ ಆದೀತೇ?"

"ಅದರ ಪ್ರತ್ಯಕ್ಷ ಅನುಭವವನ್ನೇ ಪಡೆಯಿರಿ" ಎಂದಂದು ಸುಶೀಲೆಯು ಮೆಲ್ಲಮೆಲ್ಲನೆ ನಡೆದು ಆ ಉಪವನವನ್ನು ಪ್ರವೇಶಿಸಿದಳು. ಶ್ರೀಕಂಠನೂ ಅವಳ ಹಿಂದೆಯೇ ಇದ್ದನು. ಅವರು ಮರಳಿ ಉಪವನವನ್ನು ಹೊಕ್ಕಾಗ ರಾತ್ರಿಯು ೧೧ಗಂಟೆಯಾಗಿರಬಹುದು. ಚಳಿಗಾಲವಾದ್ದರಿಂದಲೂ, ಮನೆಯ ಯಜಮಾನನೇ ಇರದ್ದರಿಂದಲೂ ಆಳು-ಹೊಳುಗಳು ಬೇಗನೆ ಮಲಗಿದ್ದರು. ಶಿತಿಕಂಠನೂ ನಿದ್ರೆಹೋದ್ದರಿಂದ ಅವನ ಸುಳವೂ ಇರಲಿಲ್ಲ. ಆಗ ಸುಶೀಲೆಯು ಶ್ರೀಕಂಠನೊಡನೆ ತನ್ನ ಕೋಣೆಯ ಕಿಟಕಿಯ ಬಳಿಗೆ ಬಂದು, ಕಿಟಕಿಯನ್ನು ಹತ್ತಲಿಕ್ಕೆ ಸಾಧನವನ್ನು ಹುಡುಕಹತ್ತಿದಳು. ಬೇಗನೆ ಸಾಧನದ ಅನುಕೂಲವಾಗಲಿಲ್ಲ. ಆಗ ಶ್ರೀಕಂಠನು ಮೆಲ್ಲಗೆ:— ಸುಶೀಲಾಬಾಯಿ, ನಿಮ್ಮ ಮನಸ್ಸಿನಲ್ಲಿ ವಿಕಲ್ಪವುಂಟಾಗದಿದ್ದರೆ, ನೀವು ನನ್ನ ಹೆಗಲ ಮೇಲೆ ಹತ್ತಿ ಕಿಟಕಿಯನ್ನು ಏರಿರಿ; ಬಳಿಕ ನಾನೂ ಬರುತ್ತೇನೆ, ಎಂದು ನುಡಿಯಲು, ಸುಶೀಲೆಗೆ ಹೇಗೆಹೇಗೋ ಅನಿಸಿದರೂ ಪ್ರಸಂಗದ ಕಡೆಗೆ ಲಕ್ಷ್ಯಗೊಟ್ಟು ಅದರಂತೆ ನಡೆದು, ಅವಳು ತನ್ನ ಕೋಣೆಯನ್ನು ಪ್ರವೇಶಿಸಿದಳು. ಶ್ರೀಕಂಠನೂ ಅವಳ ಹಿಂದಿನಿಂದ ಜಿಗಿದು ಬಂದನು. ಬಳಿಕ ಅವನು ಸ್ವಲ್ಪವೂ ಸಪ್ಪಳವಾಗದಂತೆ ಆ ಟ್ರಂಕಿನ ಬೀಗ ತೆಗೆದು ತನಗೆ ಬೇಕಾಗಿದ್ದ ಮಹತ್ವದ ಕಾಗದ-ಪತ್ರಗಳ ಗಂಟೊಂದನ್ನು ತಕ್ಕೊಂಡು, ಟ್ರಂಕಿಗೆ ಮೊದಲಿನಂತೆ ಕೀಲಿ ಹಾಕಿದನು; ಹಾಗು ಅವನು ಸುಶೀಲೆಯೊಡನೆ ಪುನಃ ಆ ಕಿಟಕಿಯ ದ್ವಾರದಿಂದ ಹೊರಗೆ ಬಂದನು. ಅವರೀರ್ವರೂ ಉಪವನ ದಾಟಿ, ಹೊರಬೀಳುತ್ತಿರಲು, ಚಂದ್ರನು ತನ್ನ ಪ್ರಿಯಕರುಣೆಯಾದ ರೋಹಿಣೀ-ತಾರೆಯೊಡನೆ ಕುಲು ಕುಲು ನಗುತ್ತ ಭೂಮಂಡಲದ ಮೇಲೆ ವಿರಾಜಿಸಲಾರಂಭಿಸಿದ್ದನು ಆ ಕೂಡಲೆ ಶ್ರೀಕಂಠನು ಸುಶೀಲೆಯನ್ನುದ್ದೇಶಿಸಿ:— "ಬಾಯಿ, ತುಸ ಚುರುಕಿನಿಂದ ಕಾಲು ಚಲ್ಲಿರಿ. ನಾನು ನಿಮ್ಮನ್ನು ಬೇರೊಂದು ಜವಾಬುದಾರಿಯ ಕೆಲಸಕ್ಕಾಗಿ ಕಳಿಸಬೇಕಾಗಿದೆ" ಎಂದನು. ಅವರೀರ್ವರೂ ತುಸ ಹೊತ್ತಿನಲ್ಲಿ ಚಾಮರಾಜಪುರ ಸ್ಟೇಶನ್ನಿನ ಬಳಿಯ ಒಂದು ಬಿಡಾರಕ್ಕೆ ಬಂದು ತಲುಪಿದರು.

ಆ ಮನೆಗೆ ಬೀಗ ಹಾಕಿತ್ತು. ಶ್ರೀಕಂಠನು ತನ್ನಲ್ಲಿಯ ಕೈಯಿಂದ ಆ ಬೀಗವನ್ನು ತೆಗೆದು, ಕೀಲವನ್ನೊತ್ತಿ ವಿದ್ಯುದ್ದೀಪವನ್ನು ಹೊತ್ತಿಸಿದನು. ಬಳಿಕ ಅವನು ಸುಶೀಲೆಯನ್ನು ಕುರಿತು:—ನೀವು ಈಗ ೧೧ಕ್ಕೆ ಹೊರಡುವ ರೈಲಿನಿಂದ ಬೆಂಗಳೂರಿಗೆ ಹೋಗಬೇಕು. ಅಲ್ಲಿಗೆ ನಾನೊಂದು ಪತ್ರ ಕೊಡುವೆನು. ಅಲ್ಲಿಗೆ ಹೋಗಿ ನನ್ನ ಕೆಲಸವನ್ನು ಮಾಡಿಕೊಂಡು ಬರುವಿರಾ?

"ನೀವೆಲ್ಲಿರುವಿರಿ?"

"ನಾನು ಇಲ್ಲಿಯೇ ಇದ್ದು, ಪೋಲೀಸರ ಸಹಾಯದಿಂದ ಆ ನಾಮಧಾರಿ ಶ್ರೀಕಂಠನ-ಶಿತಿಕಂಠನ-ಮೋಸವನ್ನು ಬೈಲಿಗೆಳೆಯಬೇಕಾಗಿದೆ. ನೀವು ಅಲ್ಲಿಗೆ ಹೋಗಿರಿ. ನಾಳೆ ನಾನು ತಂತಿ ಕೊಡುವೆನು. ಆ ಪ್ರಕಾರ ಮುಂದಿನ ವ್ಯವಸ್ಥೆ ಮಾಡಿರಿ; ಅಂದರಾಯಿತು. ನನಗಾಗಿ ಇಷ್ಟು ತೊಂದರೆ ತಕ್ಕೊಳ್ಳಲಿಕ್ಕೆ ನೀವು ಸಿದ್ಧರಿರುವಿರಾ?"

"ಶ್ರೀಕಂಠರಾಯರೇ, ಇನ್ನು ನನಗೆ ಈ ಪ್ರಕಾರದ 'ಮಾಡುವಿರಾ?' ಎಂಬ ಪ್ರಶ್ನೆಗಳನ್ನು ಕೇಳಬೇಡಿರಿ. ನಾನು ಆ ನಿಮ್ಮ ಕೆಲಸವನ್ನು ಪರೋಪಕಾರದೃಷ್ಟಿಯಿಂದ ಮಾಡುತ್ತಿರದೆ, ಸ್ವಕರ್ತವ್ಯವೆಂದು ಮಾಡುತ್ತಿರುವೆನು. ಆದುದರಿಂದ ಬೇಗನೆ ಪತ್ರ ಬರೆದುಕೊಟ್ಟು ನನ್ನನ್ನು ಗಾಡಿಯೊಳಗೆ ಕೂರಿಸಿರಿ."

ಕೂಡಲೆ ಶ್ರೀಕಂಠನು ಪತ್ರ ಬರೆಯಹತ್ತಿದನು. ೪-೬ ನಿಮಿಷಗಳಲ್ಲಿ ಅವನಿಂದ ಪತ್ರ ಬರೆದು ಸಿದ್ಧವಾಯಿತು. ಅದನ್ನು ಅವನೊಂದು ಪಾಕೀಟಿನಲ್ಲಿ ಹಾಕಿ, ಆ ಪಾಕೀಟಿನ ಮೇಲೆ ವಿಳಾಸ ಸಹ ಬರೆದನು. ಬಳಿಕ ಅವನು ಅದನ್ನು ಸುಶೀಲೆಯ ಕೈಗಿತ್ತು:—ಈ ವಿಳಾಸದ ಗೃಹಸ್ಥನು ಬೆಂಗಳೂರ ಶಂಕರಪುರದಲ್ಲಿ ಮೇನರೋಡಿನ ೫೬ನೇ ಮನೆಯಲ್ಲಿರುತ್ತಾನೆ. ಗಾಡಿಯಿಂದ ಇಳಿದ ಕೂಡಲೆ ಮೋಟಾರ ಟ್ಯಾಕ್ಸಿಮಾಡಿಕೊಂಡು ಅಲ್ಲಿಗೆ ಹೋಗಿರಿ. ಅವನು ನಿಮ್ಮ ಎಲ್ಲ ವ್ಯವಸ್ಥೆಯನ್ನು ಇಡುವನು. ಅವನೂ, ಅವನ ಹೆಂಡತಿಯೂ ನನ್ನ ಪರಿಚಯದವರಿದ್ದು, ಒಳ್ಳೇ ಸಜ್ಜನರಾಗಿರುತ್ತಾರೆ. ಇಗೋ, ಈ ನನ್ನ ಮಹತ್ವದ-ಅಗಲೆ ಆ ದುಷ್ಟ ಶಿತಿಕಂಠನ ಟ್ರಂಕಿನೊಳಗಿಂದ ತಂದ-ಕಾಗದ ಪತ್ರಗಳ ಪುಡಿಕೆಯನ್ನು ಈ ಬ್ಯಾಗಿನಲ್ಲಿ ಹಾಕಿಕೊಳ್ಳಿರಿ. ಈ ಬಗ್ಗೆ ಬಹು ಜೋಕೆ! ಈ ದಿನ ನೀವು ಬೆಳತನಕ ನಿದ್ದೆಗೆಟ್ಟರೂ ಚಿಂತೆಯಿಲ್ಲ; ಆದರೆ ಇವುಗಳನ್ನು ಮಾತ್ರ ಎಚ್ಚರದಿಂದ ಕಾಪಾಡಬೇಕು. ಅಲ್ಲಿಗೆ ಹೋದ ಬಳಿಕ ನಾನು ತಾರಿನಿಂದ ಏನೆಂದು ತಿಳಿಸುವೆನೋ, ಆ ಪ್ರಕಾರ ಈ ಕಾಗದ-ಪತ್ರಗಳ ವ್ಯವಸ್ಥೆ ಮಾಡಿರಿ; ಹಾಗು ನಾಳಿನ ಇಲ್ಲವೆ ನಾಡದಿನ ರಾತ್ರಿಯ ರೈಲಿಗೆ ಹೊರಟು ಬರ್ರಿ. ನನ್ನ ತಂತಿಯು ಬರುವವರೆಗೂ ನೀವು ಅಲ್ಲಿಯೇ ಇರ್ರಿ. ನಾನು ಬಹುಶಃ ನಾಳೆ ಮಧ್ಯಾಹ್ನ ೨ ಗಂಟೆಯ ತರುವಾಯ ೪ ಗಂಟೆಯೊಳಗೆ ನಿಮ್ಮ ಹೆಸರಿಗೆ ತಂತಿಕೊಡುವೆನು. ತಪ್ಪಿದರೆ ನಾಡದಾದರೂ ಅದೇವೇಳೆಗೆ ಕೊಡುವೆನು. ನಡೆಯಿರಿ ಇನ್ನು, ರೈಲಿನ ಕೂಗು ಕೇಳಬರುವದು ನೋಡಿರಿ, ಎಂದು ಶ್ರೀಕಂಠನು ಅವಳ ಕಡೆಗೆ ಕೊಡಬೇಕಾಗಿದ್ದ ತನ್ನ ವಾರಸಾ ಹಕ್ಕಿನ ಆ ಕಾಗದ-ಪತ್ರಗಳನ್ನು ಒಂದು ಕೈ ಪೆಟ್ಟಿಗೆಯಲ್ಲಿಟ್ಟು ಅದಕ್ಕೆ ಭದ್ರವಾಗಿ ಕೀಲಿ ಹಾಕಿ, ಕೈಯನ್ನು ಅವಳಿಗೆ ಕೊಟ್ಟು ತ್ವರಿತಗತಿ

ಯಿಂದ ಸುಶೀಲೆಯೊಡನೆ ಚಾಮರಾಜಪುರ ಸ್ಟೇಶನ್ನಿಗೆ ಬಂದನು. ಅಷ್ಟರಲ್ಲಿ ಗಾಡಿ ಬಂದು ನಿಂತಿತ್ತು. ಶ್ರೀಕಂಠನು ಒಂದು ಟಿಕೇಟು ತೆಗೆದು ತಂದು, ಸುಶೀಲೆಯನ್ನು ಹೆಣ್ಣುಮಕ್ಕಳ ಒಂದು ಕಂಪಾರ್ಟಮೆಂಟಿನಲ್ಲಿ ಕೂರಿಸಿದನು. ಹಾಗು ಜೋಕೆ, ಜೋಕೆ, ಎಂದು ಪುನಃ ಪುನಃ ಹೇಳಿದನು. ಎಂಜಿನ್ನಿಗೆ ಲಾಯಿನ್‌ಕ್ಲೀಅರದ ಸ್ಟಾಫನ್ನು ಕೊಟ್ಟಿರಲಿಲ್ಲ. ಅದರಿಂದ ಗಾಡಿ ಹೊರಡಲು, ತುಸ ಅವಕಾಶವಿದ್ದಿತು. ಆಗ ಸುಶೀಲೆಯು ಶ್ರೀಕಂಠನ ಮುಖದ ಕಡೆಗೆ ಎವೆಯಿಕ್ಕದೆ ನೋಡುತ್ತಿದ್ದಳು. ಶ್ರೀಕಂಠನೂ ಒಮ್ಮೆ ಅವಳ ಮುಖದ ಕಡೆಗೆ ದಿಟ್ಟಿಸಿ ನೋಡಿದನು. ಕೂಡಲೆ ನಾಚಿ ಅವಳು ತನ್ನ ದೃಷ್ಟಿಯನ್ನು ತಪ್ಪಿಸಿ ಕೆಳಗೆ ನೋಡಲಾರಂಭಿಸಿದಳು. ಶ್ರೀಕಂಠನು ಅವಳ ಮನೋಗತವನ್ನು ತಿಳಿದು:—ಸುಶೀಲಾಬಾಯಿ, ಹೀಗೇಕೆ ನಾಚಿಕೊಂಡೆ? ಮತ್ತೇನನ್ನಾದರೂ ಕೇಳುವದಿದ್ದರೆ ಕೇಳಿಕೋ. ಸಂಕೋಚಪಡಬೇಡ. ನನ್ನ-ನಿನ್ನ ಹೃದಯಗಳಲ್ಲಿ ಇನ್ನು ಭೇದಭಾವವಿರಗೊಡಬೇಡ.

"ವಿಶೇಷವೇನೂ ಇಲ್ಲ........"ಎಂದು ನುಡಿದು ಸುಶೀಲೆಯು ಕ್ಷಣ ಕಾಲ ಸುಮ್ಮನಾಗಿ, ಮತ್ತೆ ಮೆಲ್ಲಗೆ:—"ತಾವು ಬಹು ಎಚ್ಚರದಿಂದಲೇ ನಡೆಯಬೇಕು. ಸುಮ್ಮನೆ ಯಾವನೊಬ್ಬನ ತಂತ್ರದಿಂದ ನಡೆದು ಪೆಚಿಗೊಳಗಾ...."

"ಆ ಬಗ್ಗೆ ನೀನು ಕೊಂಚವೂ ಚಿಂತಿಸಬೇಡ. ಯಾವುದೊಂದು ಸಂಗತಿಯ ಬಗ್ಗೆ ಸಂಪೂರ್ಣ ವಿಚಾರ ಮಾಡದೆ ನಡೆಯುವಷ್ಟು ಆತುರನು ನಾನಾಗಿರುವದಿಲ್ಲ. ಗೋಡೆಯನ್ನು ಸ್ವಾಧೀನಪಡಿಸಿಕೊಂಡ ಮೇಲೆಯೇ ತಟ್ಟಿಯನ್ನು ಒದೆಯತಕ್ಕವನು. ನೀನು ಮಾತ್ರ ಒಳ್ಳೇ ಎಚ್ಚರದಿಂದ ಈ ಕೆಲಸವನ್ನು ನೀಗಿಸಿಕೊಂಡು ಬಂದೆಯೆಂದರೆ ನಾನೂ ನೀನೂ........"

ಅಷ್ಟರಲ್ಲಿ ಗಾಡಿಬಿಡುವ ಗಂಟೆಯಾಯಿತು. ಉತ್ತರಕ್ಷಣದಲ್ಲಿ ಗಟ್ಟಿಯಾಗಿ ಕೂಗಿ, ಗಾಡಿಯು ಭಕ್, ಭಕ್ ಎಂದು ಸಪ್ಪಳ ಮಾಡುತ್ತ ವೇಗದಿಂದ ಹೊರಟಿತು. ಗಾಡಿಯು ಕಣ್ಮರೆಯಾಗುವವರೆಗೂ ಶ್ರೀಕಂಠನು ಸುಶೀಲೆಯು ಕುಳಿತಿದ್ದ ಡಬ್ಬಿಯ ಕಡೆಗೆ ನೋಡಿ, ಅದು ಮರೆಯಾಗಲು ತನ್ನ ಮನೆಯ ದಾರಿ ಹಿಡಿದನು. ದಾರಿಯಲ್ಲಿ ಸುಶೀಲೆಯ ಧೈರ್ಯ, ಸಾಹಸ, ಸಮಯ ಸೂಚಕತನಗಳನ್ನು ಮನದಲ್ಲಿ ಕೊಂಡಾಡುತ್ತ ಸಾಗಿದ್ದನು.

ಅವನ ಬಿಡಾರವು ಚಾಮರಾಜಪುರಸ್ಟೇಶನ್ನಿಗೆ ಸಮೀಪದಲ್ಲೇ ಇದ್ದುದರಿಂದ ೨-೩ ನಿಮಿಷಗಳಲ್ಲೇ ಅವನು ತನ್ನ ಮನೆಗೆ ಬಂದು, ಹಾಸಿಗೆಯ ಮೇಲೆ ಬಿದ್ದುಕೊಂಡನು. ಎಷ್ಟೋ ಹೊತ್ತಿನ ವರೆಗೆ ಅಂದು ಅವನಿಗೆ ನಿದ್ದೆ ಹತ್ತಲಿಲ್ಲ. ತನ್ನ ಭವಿತವ್ಯತೆ, ಶಿತಿಕಂಠನ ನೀಚತನ, ಸುಶೀಲೆಯ ಸುಹೃದಯ ಇತ್ಯಾದಿ

ವಿಷಯಗಳು ಆ ನಿದ್ದೆ ಹತ್ತಿದಾಗಿನ ಸಮಯದಲ್ಲಿ ಅವನ ಚರ್ವಿತಚರ್ವಣಗಳಾ ಗಿದ್ದವು. ಆ ವಿಚಾರಗಳಲ್ಲಿ ಅವನಿಗೆ ಯಾವಾಗ ನಿದ್ದೆ ಹತ್ತಿತೆಂಬದು ಅವನದವ ನಿಗೇ ಗೊತ್ತಾಗದಿರಲು, ವಾಚಕರೇ ನಾವು ನಿಮಗದನ್ನೆಂತು ತಿಳಿಸುವದು?

ಇತ್ತ ಗಾಡಿಯಲ್ಲಿ ಕುಳಿತು ನಡೆದಿದ್ದ ಸುಶೀಲೆಯು ತನ್ನ ಕೈ ಪೆಟ್ಟಿಗೆಯಲ್ಲಿ ಮಹತ್ವದ ಕಾಗದ-ಪತ್ರಗಳಿದ್ದುದರಿಂದ, ಆ ಇಡಿ ರಾತ್ರಿಯನ್ನೆಲ್ಲ ಕಣ್ಣಿಗೆ ಕಣ್ಣು ಹಚ್ಚದಂತೆ ಎಚ್ಚತ್ತೇ ಕಳೆದಳು. ಬೆಳಗಿನ ೫|| ಗಂಟೆಗೆ ಆ ರೈಲು ಬೆಂಗ ಳೂರ ಸಿಟಿ ಸ್ಟೇಶನ್ನಿಗೆ ಬಂದು ತಲುಪಿತು. ಅವಳು ತನ್ನ ಕೈಪೆಟ್ಟಿಗೆಯೊಡನೆ ಇಳಿದು, ಸ್ಟೇಶನ್ನಿನ ಹೊರಗೆ ಬಂದು, ಒಂದು ಮೋಟಾರುಟ್ಯಾಕ್ಸಿಯನ್ನು ಗೊತ್ತುಮಾಡಿಕೊಂಡು ಶಂಕರಪುರದೊಳಗಿನ ತಾನು ಹೋಗಬೇಕಾಗಿದ್ದ ಮನೆಗೆ ನಡೆದಳು. ಇವಳು ಮನೆಗೆ ಹೋದಾಗ ಮನೆಯ ಯಜಮಾನನು ಮನೆಯಲ್ಲಿರ ಲಿಲ್ಲ. ಅಲ್ಲಿ ಒಬ್ಬ ವಯಸ್ಸಾದ ಹೆಂಗಸಿದ್ದಳು. ಸುಶೀಲೆಯು ಕೇಳಿದ ಗೃಹ ಸ್ಥನು ಅವಳ ಗಂಡನು. ಆದರಿಂದ ಅವಳು ಸುಶೀಲೆಯನ್ನು ಆದರದಿಂದ ಬರ ಮಾಡಿಕೊಂಡಳು. ಅಷ್ಟರಲ್ಲಿ ಒಬ್ಬ ವಯಸ್ಸಾದ ಗೃಹಸ್ಥನು ಹೊರಗಿನಿಂದ ಬಂದನು. ಸುಶೀಲೆಯು ಶ್ರೀಕಂಠನು ಕೊಟ್ಟಿದ್ದ ಪತ್ರವನ್ನು ಅವನಿಗೆ ಕೊಡಲು, ಅವನು ಅದನ್ನೋದಿಕೊಂಡು ಅವಳನ್ನು ತಮ್ಮ ಮನೆಯ ಮೇಲಂತಸ್ತಿನ ಮೇಲಿನ ಒಂದು ಪ್ರಶಸ್ತವಾದ ಕೋಣೆಯಲ್ಲಿಳಿಸಿ:—ತಂಗೀ, ನೀನು ಇಲ್ಲಿ ಸುಖ ವಾಗಿರು, ನಿನಗೇನೇನು ಬೇಕೋ ಅದನ್ನೆಲ್ಲ ಇಸಕೋ ಶ್ರೀಕಂಠನು ನಮಗೆ ಪರಕೀಯನಂತಿಲ್ಲ, ಎಂದು ಹೇಳಿ, ಅವನು ಯಾವಾಗ ಬರುವನು? ಅವನು ಸುಖವಾಗಿರುವನಷ್ಟೇ! ಇತ್ಯಾದಿ ಪ್ರಶ್ನೆಗಳನ್ನು ಮಾಡಿದನು.

ಸುಶೀಲೆಯು ಸಂಕ್ಷಿಪ್ತವಾಗಿ ಅವನ ಪ್ರಶ್ನೆಗಳಿಗೆಲ್ಲ ಉತ್ತರ ಕೊಟ್ಟಳು. ಅಷ್ಟರಲ್ಲಿ ಆ ಮನೆಯ ಯಜಮಾನಳೂ ಅಲ್ಲಿಗೆ ಬಂದಳು. ಅವಳು ಸುಶೀಲೆಯನ್ನು ಕೆಳಗ ಕರೆದೊಯ್ದು ಆಕೆಯ ಪ್ರಾತರ್ವಿಧಿ, ಮುಖಮಾರ್ಜನ, ಹೆಳಲು, ಸ್ನಾನ-ಪಾನಗಳ ವ್ಯವಸ್ಥೆ ಮಾಡಿದಳು. ಸುಶೀಲೆಯು ಆ ಮನೆಯವರಿಗೆ ಕೇವಲ ಅಪ ರಿಚಿತಳಾಗಿದ್ದರೂ ಅವರ ಪ್ರೇಮಲಸ್ವಭಾವದಿಂದ ಅವಳಿಗೊಳ್ಳೇ ಸಮಾಧಾನ ವೆನಿಸಹತ್ತಿತು. ಬಳಿಕ ಸುಶೀಲೆಯು ತುಸ ಉಪಾಹಾರ ಮಾಡಿಕೊಂಡು ತನ್ನ ಕೋಣೆಗೆ ಹೋಗಿ ಮಲಗಿಕೊಂಡಳು. ಕಳೆದ ರಾತ್ರಿಯನ್ನೆಲ್ಲ ಕಡುಸಾಹಸದ ಕೃತ್ಯಗಳಲ್ಲಿ ಹಾಗು ಜಾಗರಣೆಯಲ್ಲಿ ಕಳೆದದ್ದರಿಂದ, ಅವಳಿಗೆ ಕೂಡಲೆ ಗಾಢ ವಾದ ನಿದ್ದೆಹತ್ತಿತು. ೧೧ ಗಂಟೆಗೆ ಆ ಮನೆಯವಳು ಅವಳನ್ನು ಊಟಕ್ಕೆಬ್ಬಿಸ ಹೋಗಲಿಕ್ಕೂ, ಸುಶೀಲೆಗೆ ಎಚ್ಚರವಾಗಲಿಕ್ಕೂ ಗಂಟೇ ಬಿದ್ದಿತು. ಕೂಡಲೆ ಎದ್ದು ಮೋರೆ ತೊಳಕೊಂಡು ಊಟಕ್ಕೆ ಕುಳಿತಳು. ಆ ಭೋಳೇಸ್ವಭಾವದ

ಸ್ತ್ರೀಯು ಇವಳಿಗೆ ಆಗ್ರಹದಿಂದ ಬಡಿಸಿ ಉಣಿಸಿದಳು. ಊಟವಾದ ನಂತರ ತಾನೆರಡುತಾಸು ಹರಟಿ ಹೊಡೆದ ಬಳಿಕ, ಆ ಮನೆಯುವಳು ಈ ಹುಡುಗಿಯನ್ನು ಶಂಕರಮಠ, ಮತ್ತಾವದೋ ಒಂದು ದೇವಸ್ಥಾನಗಳನ್ನು ನೋಡಿಕೊಂಡು ಬರಲಿಕ್ಕಾಗಿ ಕರೆದಳು. ಶ್ರೀಕಂಠನ ತಂತಿಗಾಗಿ ತಾನು ನಾಲ್ಕು ಗಂಟೆಗೆ ಮನೆಯಲ್ಲೇ ಇರಬೇಕೆಂದು ಅವಳ ದೃಢನಿಶ್ಚಯವಾಗಿದ್ದರೂ, ಆ ಮನೆಯುವಳ ಪ್ರೇಮಲ ಆಹ್ವಾನವನ್ನು ಅವಳು ಅಲ್ಲಗಳೆಯದಾದಳು. ಇವಳೊಡನೆ ಹೋಗಿ ಬೇಗನೇ ೪-೪|| ಗಂಟೆಗೆ ಮನೆಗೆ ಬಂದರಾಯಿತೆಂದು ಅಂದುಕೊಂಡು ಸುಶೀಲೆಯು ಆ ಮನೆಯುವಳೊಡನೆ ಹೊರಹೊರಟಳು.

ಹೆಣ್ಣುಮಕ್ಕಳು ಏನನ್ನಾದರೂ ನೋಡಲಿಕ್ಕೆ ಅಥವಾ ಕೊಳ್ಳಲಿಕ್ಕೆ ಇಲ್ಲವೆ ಬರೇ ಮನೆಯ ನೀರು ತರಲಿಕ್ಕೆ ಹೊರಟರೂ, ಅವರು ತಮ್ಮಷ್ಟಕ್ಕೆ ತಾವೆಂದೂ ಹೋಗುವದಿಲ್ಲ. ಓಣಿಯೊಳಗಿನ ತಮ್ಮ ಪರಿಚಿತ-ಅಪರಿಚಿತ-ಹೆಂಗಸರ ಮೇಳವನ್ನು ಕೂಡಿಸಿಕೊಂಡೇ ಹೊರಡುವ ರೂಢಿಯಾಗಿರುತ್ತದೆ. ಇದೇ ಮೇರೆಗೆ ಸುಶೀಲೆಯಿಳಿದುಕೊಂಡಿದ್ದ ಆ ಮನೆಯುವಳೂ ತಮ್ಮ ಓಣಿಯೊಳಗಿನ ೩-೪ಜನ ಪ್ರೌಢ-ತರುಣ ಸುವಾಸಿನಿಯರನ್ನೂ, ಒಬ್ಬಿಬ್ಬರೂ ವಿಧವೆಯರನ್ನೂ ಕೂಡಿಸಿಕೊಂಡು ಸುಶೀಲೆಗೆ ಶಂಕರಮಠವನ್ನು ತೋರಿಸಲಿಕ್ಕೆ ಹೊರಟಳು. ಹಾದಿಯಲ್ಲಿ ಕೂಡಿದ ಪ್ರತಿಯೊಬ್ಬ ಹೆಂಗಸಿಗೂ "ಇವಳು ನಮ್ಮ ಶ್ರೀಕಂಠನ ಕಡೆಯುವಳು. ಕೆಲ ದಿನಗಳ ಹಿಂದೆ ನಮ್ಮಲ್ಲಿ ಒಬ್ಬ ತರುಣ ಹುಡುಗನಿದ್ದನಷ್ಟೇ; ಆತನೇ ಶ್ರೀಕಂಠನು. ಅವನು ಇನ್ನೂ ಹುಡುಗನಾಗಿದ್ದರೂ ಸರಳ ಸ್ವಭಾವದವನು. ಈಗಿನ ಮನ್ವಂತರದ ಹುಡುಗರಂತೆ ಅವನು ಪೋಕರಿಯಲ್ಲ. ಕೆಲವು ಕೆಲಸಕ್ಕಾಗಿ ಇವಳು ಅವನ ಕಡೆಗೆ ಬಂದಿರುವಳು. ಅವನಾದರೂ ಬಂದೆರಡು ದಿನಗಳಲ್ಲಿ ಇಲ್ಲಿಗೆ ಬರಬಹುದಾಗಿದೆಯಂತೆ." ಇತ್ಯಾದಿ ಪ್ರಾಸ್ತಾವಿಕ ಭಾಷಣವನ್ನು ಮಾಡಿ, ಸುಶೀಲೆಯ ಪರಿಚಯ ಮಾಡಿಕೊಡುತ್ತಿದ್ದಳು.

ಅವರು ಶಂಕರಮಠಕ್ಕೆ ಹೋದಾಗ "ಈಗಿನ ಮನ್ವಂತರವೂ, ಸ್ತ್ರೀಯರ ಸುಧಾರಣೆಗಳೂ" ಎಂಬ ವಿಷಯದ ಮೇಲೆ ಒಬ್ಬ ಹಿಂದೂ ವಿದುಷಿಯ ವ್ಯಾಖ್ಯಾನವು ನಡೆದಿತ್ತು. ಅದು ಅಲ್ಲಿ ಒಂದು ತಾಸಿನ ವರೆಗೆ ಆಯಿತು. ವ್ಯಾಖ್ಯಾತೃ ಹೆಣ್ಣುಮಗಳು ಸುಶೀಲೆಯೊಡನೆ ಬಂದಿದ್ದ ಹೆಂಗಸರ ಸ್ಥಿರಪರಿಚಿತಳು. ಅದರಿಂದ ಅವರು ಅವಳ ವ್ಯಾಖ್ಯಾನ ಮುಗಿಯುವವರೆಗೆ ನಿಂತೇ ಬಿಟ್ಟರು. ತನ್ನೊಡನೆ ಬಂದಿದ್ದ ಎಲ್ಲ ಹೆಂಗಳೆಯರೂ ನಿಂತಬಳಿಕ, ಸುಶೀಲೆಯಾದರೂ ಅಲ್ಲಿಂದ ಒಬ್ಬಳೇ ಮನೆಗೆ ಬರುವ ಬಗೆ ಹೇಗೆ? ಅವಳೂ ಅಲ್ಲಿ ನಿಂತಳು; ಆದರೆ ಆಕೆಯ ಮನಸ್ಸಿನಲ್ಲೆಲ್ಲ "ತಾನು ಮನೆಯಲ್ಲಿಲ್ಲದಾಗ ಶ್ರೀಕಂಠನ

ತಂತಿ ಬಂದು ವಾಪಸೆಲ್ಲಿ ಹೋಗುವದೋ' ಎಂಬ ತಳಮಳವು ಏಕೋಪ್ರಕಾರ ವಾಗಿ ಸಾಗಿತ್ತು. "ನನ್ನ ತಂತಿ ಬರುವದಿದೆ; ನಾನು ಮನೆಗೆ ಹೋಗುವೆನು" ಎಂದು ಆ ಮಹಿಳೆಯರೆದುರಿಗೆ ಹೇಳಿ ಹೋಗುವ ಧೈರ್ಯವೂ ಅವಳಿಗಾಗಲೊಲ್ಲದು. ಹೀಗೆ ಅವಳು ಎರಡು-ಮೂರು ತಾಸುಗಳನ್ನು ಆ ಕೂಡಿದ ಹೆಂಗಸರ ಸಹವಾಸದಲ್ಲಿ ಕಳೆದು, ಸರಾಸರಿ ೬ ಗಂಟೆಯ ಸಮಯಕ್ಕೆ ಮನೆಗೆ ಬಂದಳು. ಅವಳು ತಾನಿಳಿದುಕೊಂಡಿದ್ದ ಮೋಲಂತಸ್ತಿನ ಕೋಣೆಗೆ ಹೋಗಲಿಕ್ಕೂ, ಒಬ್ಬ ತಾರಿನ ಪ್ಯೂನನು ಆ ಮನೆಯ ತಲೆಬಾಗಿಲಿಗೆ ಬಂದು:--"ಸುಶೀಲಾಬಾಯಿ"ಎಂಬ ವರು ಇದೇ ಮನೆಯಲ್ಲಿರುವರಷ್ಟೇ? ಅವರ ಹೆಸರಿಗೊಂದು ಜರೂರಿಯ ತಂತಿ ಬಂದಿದೆ. ಇಕೊಳ್ಳಿರೆಂದನು.

ಆ ತಾರಿನ ವರ್ತಮಾನವನ್ನು ಕೇಳಿ ಆ ಮನೆಯ ಯಜಮಾನಿಯೂ, ಅಲ್ಲಿ ನೆರೆದಿದ್ದ ಇತರ ಹೆಂಗಸರೂ ಗಾಬರಿಗೊಂಡು ಸುಶೀಲೆಯನ್ನು ಕೆಳಗೆ ಕರೆದರು. ಅವಳು ಬರುತ್ತಲೇ ತಾರಿನವನು ಅವಳ ಸಹಿ ಮಾಡಿಸಿಕೊಂಡು, ಅಂಟು ಹಚ್ಚಿದ ಒಂದು ಹಳದೀಬಣ್ಣದ ಲಕೋಟೆಯನ್ನು ಅವಳ ಕೈಗಿತ್ತು ಹೊರಟುಹೋದನು. ಸುಶೀಲೆಯು ಅದನ್ನೊಡೆದು ಒಳಗಿನ ಕಾಗದವನ್ನು ಓದತೊಡಗಿದಳು. "ನೀನು ಸಂಜೆಯ ಆರ ಗಾಡಿಗೆ ತಪ್ಪದೆ ಹೊರಟು ಬಾ ನೀನು ಬಂದ ಕೂಡಲೆ ನನ್ನ ಕೆಲಸವಾಗುವದು. ಬರುವಾಗ ನೀನು ಚಾಮರಾಜಪುರ ಸ್ಟೇಶನ್ನಿಗೆ ಬರಬೇಡ, ಮೈಸೂರ ಸ್ಟೇಶನ್ನಿಗೇ ಇಳಿ. ಸ್ಟೇಶನ್ನಿಗೆ ನಾನು ಬಂದಿರುತ್ತೇನೆ" ಎರಡು-ಮೂರು ಸಾರೆ ಅದನ್ನೋದಿಕೊಂಡು ಆ ಸಂಗತಿಯನ್ನು ಮನೆಯ ಒಡತಿಗೆ ಹೇಳಿದಳು. ಅದನ್ನು ಕೇಳಿ ಅಲ್ಲಿ ಕೂಡಿದ್ದ ಎಲ್ಲ ಹೆಂಗಸರಿಗೂ ಆಶ್ಚರ್ಯವೆನಿಸಿತು. ಈ ಅಪರಿಚಿತ ಯುವತಿಯು ಇಂದೇ ಬೆಳಗ್ಗೆ ಇಲ್ಲಿಗೆ ಬರುತ್ತಾಳೇನು, ಇವಳ ಹೆಸರಿಗೆ ಹೀಗೆ ಆಕಸ್ಮಿಕವಾಗಿ ತಿರುಗಿ ಬರಲು ತಂತಿ ಬರುತ್ತದೇನು? ಎಂಬ ವಿಷಯವಾಗಿ ಅವರೆಲ್ಲರೂ ಕುಚು ಕುಚು ಮಾತಾಡಲಾರಂಭಿಸಿದರು.

ಕೆಲ ನಿಮಿಷಗಳನಂತರ ಸುಶೀಲೆಯು ಆ ಮನೆಯ ಒಡೆಯಳನ್ನು ಕುರಿತು:-ತಾಯಿ, ಇಂದು ನನಗೆ ಹಸಿವೆಯಾಗಿಲ್ಲ; ಮಧ್ಯಾಹ್ನದಲ್ಲಿ ನೀವು ಹೆಚ್ಚಾಗಿ ಉಣಬಡಿಸಿರುವಿರಿ. ನಿನ್ನಿನ ಜಾಗರಣೆ ಹಾಗೂ ಇಂದು ಮತ್ತೆ ಮಾಡಬೇಕಾದ ಜಾಗರಣೆ ಇವುಗಳ ಸಲುವಾಗಿ ನಾನು ಇಂದು ರಾತ್ರಿ ಉಪವಾಸವಿರುವದೇ ಹಿತವಾಗಿ ತೋರುತ್ತದಾದ್ದರಿಂದ, ನೀವು ನನ್ನ ಊಟಕ್ಕಾಗಿ ಅಡಿಗೆಯ ಅವಸರ ಪಡಬೇಡಿರಿ, ಎಂದು ಹೇಳಿದಳು ಅದನ್ನು ಕೇಳಿ ಆ ಮನೆಯ ಗಂಡಹೆಂಡರಿಬ್ಬರೂ ಸುಶೀಲೆಗೆ ಸಿಟ್ಟು ಮಾಡಿ:—ನಮ್ಮ ಮನೆಗೆ ಬಂದ ನೀನು ಉಪವಾಸಹೊರಡುವ ದೆಂದರೇನು? ನಿನಗೆ ಬೇಕಾದಷ್ಟೇ ನಾಲ್ಕೇ ತುತ್ತು ತಿಂದು ತೆರಳು. ಇಂದೇ

ಬಂದು ಇಂದೇ ಹೋಗುವ ಅವಸರವೇನು? ಒಂದೆರಡು ದಿನಗಳವರೆಗಾದರೂ ಇದ್ದಿದ್ದರೆ ನಮಗೆ ಸಮಾಧಾನವೆನಿಸುತ್ತಿತ್ತು, ಎಂದರು.

"ಆದರೆ ತಾಯಂದಿರೆ, ಮಾಡುವದೇನು? ಅಷ್ಟು ಜರೂರಿಯ ಕೆಲಸಕ್ಕಾಗಿಯೇ ಶ್ರೀಕಂಠರಾಯರು ನನ್ನನ್ನು ಇಲ್ಲಿಗೆ ಕಳಿಸಿದ್ದರು; ಹಾಗು ಅದಕ್ಕಾಗಿಯೇ ವಾಪಸು ಬರಲು ತಂತಿಕೊಟ್ಟಿರುವರು. ಅಂದಬಳಿಕ ನಾನಿಲ್ಲಿ ನಿಲ್ಲುವ ಬಗೆ ಹೇಗೆ? ಇಂದು ನಾನು ಮರಳಿ ಹೋಗುತ್ತಿದ್ದರೂ ೨-೩ ದಿನಗಳಲ್ಲಿಯೇ ನಾನೂ ಅವರೂ ಕೂಡಿ ಬಂದು ನಾಲ್ಕೆಂಟು ದಿನಗಳ ವರೆಗೆ ನಿಮ್ಮಲ್ಲಿ ಆನಂದದಿಂದಿರುತ್ತೇವೆ." ಎಂದು ಸುಶೀಲೆಯು ವಿನಯಪೂರ್ವಕವಾಗಿ ನುಡಿದಳು.

"ಊಟವೊಲ್ಲದಿದ್ದರೆ ಬೇಡ, ತುಸ ಕಾಫಿ-ಉಪ್ಪಿಟ್ಟನ್ನಾದರೂ ತಕೊಳ್ಳಲೇ ಬೇಕು. ಏನೇ, ಬೇಗನೆ ಕಾಫಿಗೆ ಎಸರಿಡು; ಹಾಗು ಮೆತ್ತಗಾದ ಇರುಳ್ಳಿಯ ಉಪ್ಪಿಟ್ಟನ್ನೂ ತುಸ ಮಾಡು" ಎಂದು ಆ ಮನೆಯ ಯಜಮಾನನು ತನ್ನ ಮಡದಿಗೆ ಹೇಳಿದನು.

"ಛೇ-ಛೇ, ಅದೇನೂ ಬೇಡ. ನನಗೊಂದು ಟ್ಯಾಕ್ಸಿ ಗೊತ್ತುಮಾಡಿ ಕೊಡಿರೆಂದರಾಯಿತು" ಎಂದು ಸುಶೀಲೆಯು ಅನ್ನಲು,

"ಛಿ, ಹುಡಿಗೀ, ಮತ್ತೆ ಮತ್ತೆ ನಿನ್ನ ದುರಾಗ್ರಹವನ್ನೇ ನನ್ನೆದುರಿಗೆ ತೋರಬೇಡ ನೀನು ನನ್ನೊಡನೆ ತುಸ ಕಾಫಿ-ಉಪ್ಪಿಟ್ಟು ತಕೊಂಡ ಕೂಡಲೆ ನಿನ್ನನ್ನು ಸ್ಟೇಶನ್ನಿಗೆ ಕಳಿಸುವೆನು. ಗಾಡಿ ಬಿಡಲು ಇನ್ನೂ ಒಂದು ತಾಸಿನ ಅವಕಾಶವಿದೆ ಆ ಬಗ್ಗೆ ನೀನೇನೂ ಆಲೋಚಿಸಬೇಡ" ಎಂದೆಂದು, ತನ್ನ ಹೆಂಡತಿಯನ್ನು ಕುರಿತು:—ಆಯಿತೇನೇ ಕಾಫಿಯು? ಎರಡು ಲೋಟಾಗಳನ್ನು ತುಂಬಿ ತಂದಿಡು; ಹಾಗು ಎರಡು ಬಿಡೆಲೆಗಳಲ್ಲಿ ಸ್ವಲ್ಪ-ಸ್ವಲ್ಪ ಉಪ್ಪಿಟ್ಟನ್ನೂ ಒಡಿಸು; ರುಚಿಕರವಾಗಿದ್ದರೆ ಮತ್ತೆ ಬಡಿಸುವಿಯಂತೆ ಎಂದನು.

ಗೃಹಿಣಿಯು ಕೂಡಲೆ ಆ ಪ್ರಕಾರ ವ್ಯವಸ್ಥೆ ಮಾಡಿದಳು. ಗೃಹಸ್ಥನೂ ಕೈಕಾಲು ಮೋರೆ ತೊಳೆದು, ಮಣೆಯ ಮೇಲೆ ಬಂದು ಕುಳಿತನು. ಸುಶೀಲೆಯು ತನ್ನ ಸಾಮಾನುಗಳನ್ನೆಲ್ಲ ಕೆಳಗೆ ತಂದು ಕೈಕಾಲು ತೊಳೆದು ತನಗಾಗಿ ಸಿದ್ಧಪಡಿಸಿದ್ದ ಆಸನದಲ್ಲಿ ಕುಳಿತು, ಅನವಸರವಸದಿಂದಲೇ ತುಸ ಕಾಫಿ-ಉಪ್ಪಿಟ್ಟುಗಳನ್ನು ಸೇವಿಸಿ ಕೈತೊಳಕೊಂಡು ಹೊರಡಲು ಸಿದ್ಧಳಾದಳು. ಅಷ್ಟರಲ್ಲಿ "ಫೊಂ-ಫೊಂ" ಎಂದು ಕೂಗುತ್ತ ಒಂದು ಮೋಟಾರುಕಾರು ಆ ಮನೆಯ ಬಾಗಿಲಿಗೆ ಬಂದು ನಿಂತಿತು. ಮನೆಯ ಯಜಮಾನ-ಯಜಮಾನತಿಯರಿಗೆ ಪೊಡಮೊಟ್ಟು ಅವರ ಶುಭಾಶೀರ್ವಾದ ಹೊಂದಿ, ಸುಶೀಲೆಯು ಮೋಟಾರಟ್ಯಾಕ್ಸಿಯಲ್ಲಿ ಬಂದು ಕುಳಿತಳು. ಆ ಗೃಹಸ್ಥನು ಕೈಪೆಟ್ಟಿಗೆಯನ್ನು ಅವಳ ಕೈಗಿತ್ತನು.

"ಆಲ್ ರಾಯಿಟ್?" ಎಂದು ಪ್ರಶ್ನೆಮಾಡಿದ ಮೋಟಾರಕಾರಿನ ಡ್ರಾಯವ್ಹರನಿಗೆ "ಆಲ್ ರಾಯಿಟ್" ಎಂದು ಸುಶೀಲೆಯು ಉತ್ತರ ಕೊಡಲು:—"ಟಿರಿರಿಂ" ಎಂಬ ಸೆಲ್ಫ ಹಾರ್ನನ್ನು ಕೊಡುತ್ತ ಡ್ರಾಯವರನು ಮೋಟಾರನ್ನು ಬಿಟ್ಟನು. ಅದು ಸಾಗಹತ್ತಿದ ಬಳಿಕ ಸುಶೀಲೆಯು ತನ್ನ ಹ್ಯಾಂಡಬ್ಯಾಗಿನ ಕೀಲಿ ತೆಗೆದು ಒಳಗಿದ್ದ ಕಾಗದ-ಪತ್ರಗಳೆಲ್ಲ ವ್ಯವಸ್ಥಿತವಾಗಿವೆಯೋ ಹೇಗೆಂಬದನ್ನು ಅವಲೋಕಿಸಿದಳು. ಅವೆಲ್ಲ ಇಟ್ಟ ಹಾಗೆಯೇ ಇದ್ದವು ಬಳಿಕ ಅವಳು ಗಾಡಿಯ ತಿಕೀಟಿಗಾಗಿ ರೂಪಾಯಿಗಳನ್ನೂ, ಮೋಟಾರಿನ ಬಾಡಿಗೆಗಾಗಿ ಕೆಲ ಚಿಲ್ಲರೆ ನಾಣ್ಯಗಳನ್ನೂ ತೆಗೆಯಹತ್ತಿದಳು. ಅಷ್ಟರಲ್ಲಿ ಕೈಯಿಂದ ಒಂದು ಅರ್ಧರೂಪಾಯಿಯ ನಾಣ್ಯವು ಮೋಟಾರಿನಲ್ಲಿ ಬಿತ್ತು. ಅದನ್ನು ಹುಡುಕಿಕೊಳ್ಳುವಷ್ಟರಲ್ಲಿ ಮೋಟಾರಕಾರು ಬೆಂಗಳೂರ ಸಿಟಿ ಸ್ಟೇಶನ್ನಿನ ಬಳಿಯ ಸ್ಟ್ಯಾಂಡಿಗೆ ಹೋಗಿ ನಿಂತುಕೊಂಡಿತು. ಮೈಸೂರ ಕಡೆಗೆ ಹೋಗುವ ಗಾಡಿಯು ಸಿದ್ಧವಾಗಿ ನಿಂತದ್ದು ದೃಷ್ಟಿಗೆ ಬಿದ್ದ ಕೂಡಲೆ ಸುಶೀಲೆಯು ಅವಸರದಿಂದ ಮೋಟಾರಟ್ಯಾಕ್ಸಿಯವನ ಬಾಡಿಗೆ ಮುಟ್ಟಿಸಿ ರೈಲಿನ ತಿಕೀಟು ತಕ್ಕೊಂಡು ಹೆಣ್ಣುಮಕ್ಕಳ ಡಬ್ಬಿಯನ್ನೇರಿದಳು. ಆ ಗಡಿಬಿಡಿಯಲ್ಲಿ ಅವಳು ತನ ಕೈಪೆಟ್ಟಿಗೆಗೆ ಕೀಲಿ ಹಾಕಲಿಕ್ಕೆ ಮರೆತಳು.

ಗಾಡಿಯಲ್ಲಿ ಹೆಚ್ಚಾಗಿ ಗದ್ದಲವಿರಲಿಲ್ಲ. ಬೇಕಾದಷ್ಟು ಸಾವಕಾಶವಾಗಿ ಸಾಗಿ ಮೈಸೂರಿಗೆ ಹೋಗುವ ಆ ಮಿಕ್ಸಗಾಡಿಗೆ ಪ್ಯಾಸೆಂಜರರೇ ಕಡಿಮೆ. ಅದರಲ್ಲಿಯೂ ಒಬ್ಬೊಂಟಿಗರಾದ ಹೆಣ್ಣುಮಕ್ಕಳಂತೂ ಇದ್ದೇ ಇರಲಿಲ್ಲ. ತಮ್ಮ ಸಂಗಡಿಗರೊಡನೆ ನಡೆದಿದ್ದ ಹೆಂಗಸರು ಗಂಡಸರ ಡಬ್ಬಿಗಳಲ್ಲೇ ಕುಳಿತು ಸಾಗಿದರು. ಹೀಗಾದ್ದರಿಂದ ಸುಶೀಲೆಯೊಬ್ಬಳೇ ಆ ಹೆಣ್ಣುಮಕ್ಕಳ ಇಡೀ ಡಬ್ಬಿಯಲ್ಲಿ ಒಂದು ಮೂಲೆಯಲ್ಲಿ ದೀಪದ ಪ್ರಕಾಶದಲ್ಲಿ ಕುಳಿತಿದ್ದಳು. ಜನರಿರುವದು ಅವಳಿಗೆ ಅಷ್ಟೇನೂ ಅವಶ್ಯಕವಾಗಿರದಿದ್ದರೂ, ರಾತ್ರಿಯ ಕಾಲದಲ್ಲಿ ಇಡೀ ಡಬ್ಬಿಯಲ್ಲಿ ಒಬ್ಬಳೇ ಕುಳಿತಿರುವದು ಬೇಜಾರದ ಹಾಗು ತುಸ ಅಂಜಿಕೆಯ ವಿಷಯವಾಯಿತು.

ಕೋರೀ ಹುಳದಂತೆ-ಮಂದಗತಿಯಿಂದ ಸಾಗಿ, ಆ ಗಾಡಿಯು ಸರಾಸರಿ ೨ ಗಂಟೆ ರಾತ್ರಿಗೆ ಮದ್ದೂರ ಸ್ಟೇಶನ್ನಿಗೆ ಬಂದಿತು. ಅದೇ ಸ್ಟೇಶನ್ನಿನಲ್ಲಿ ಮೈಸೂರ ಕಡೆಯಿಂದ ಬರುವ ಹಾಗೂ ಮೈಸೂರಿಗೆ ಹೋಗುವ ರಾತ್ರಿಯ ಮಿಕ್ಸಗಾಡಿಗಳ ಕ್ರಾಸಿಂಗವಿತ್ತು. ಮೈಸೂರ ಕಡೆಯ ಗಾಡಿಯು ಈ ಮೊದಲೇ ಬಂದಿತ್ತಾದ್ದರಿಂದ ಅದನ್ನು ಏರಿಳಿಯುವ ಜನರ ಗಲಾಟೆಯು ಕುಗ್ಗಿತ್ತು. ಮದ್ದೂರಲ್ಲಿ ಮೇಲಿನಂತಹ ಶೀಘ್ರಗತಿಯ ಗಾಡಿಗಳೇ ಕಾಲು ತಾಸಿನ ಮೇಲೆ ನಿಲ್ಲುತ್ತಿರಲು, ಸುಶೀಲೆಯು ಕುಳಿತಂಥ ರಾತ್ರಿಯ ಶಟಲ್ಲಿನ ಪಾಡೇನು?

# ೫ನೇ ಮೆಟ್ಟಿಲು--ಶ್ರೀಕಂಠನ ಬಲಿ.

ಎಲ್ಲ ರೇಲ್ವೆಗಳಲ್ಲೂ ರಾತ್ರಿಯ ಕಾಲದಲ್ಲಿ ಕಳವು-ಮೋಸಗಳಾಗುವದು ಹೆಚ್ಚು; ಅದರಲ್ಲಿಯೂ ಹೆಣ್ಣುಮಕ್ಕಳ ಡಬ್ಬಿಯಲ್ಲಿ ಆ ಪ್ರಮಾಣವು ವಿಶೇಷವು. ಮೈಸೂರ-ಬೆಂಗಳೂರ ನಡುವಿನ ಸ್ಟೇಶನ್ನುಗಳಲ್ಲಂತೂ ಆ ಕಸಬಿನವರೇ ಹೆಚ್ಚೆಂದು ಅಲ್ಲಿಯ ರಹಿವಾಸಿಗಳೇ ಅನ್ನುತ್ತಿರುತ್ತಾರೆ. ಇನ್ನು ಈ ವೃಗಳನ್ನು ಪ್ರವಾಸಿಗರು ತಮ್ಮ ತಮ್ಮೊಳಗೆ ಮಾಡುತ್ತಾರೋ ಇಲ್ಲವೆ ರೇಲ್ವೆಯ ನೌಕರ-ಚಾಕರರು ಮಾಡುತ್ತಿರುವರೋ ಅಥವಾ ರೇಲ್ವೆ ಸ್ಟೇಶನ್ನುಗಳಲ್ಲಿ ಹೊಂಚು ಹಾಕಿಕೊಂಡು ಕುಳಿತಿದ್ದ ಕಸಬುಗಾರರಾದ ಕಳ್ಳರೇ ಮಾಡುವರೋ ದೇವರಿಗೇ ಗೊತ್ತು! ಈ ಎಲ್ಲ ಸಂಗತಿಯು ಸುಶೀಲೆಗೆ ಗೊತ್ತಿತ್ತಾದ್ದರಿಂದಲೇ, ಆವಳು ಆ ಗಾಡಿಯಲ್ಲಿ-ಹೆಂಗಸರ ಡಬ್ಬಿಯಲ್ಲಿ- ಒಬ್ಬಳೇ ಕುಳಿತುಕೊಳ್ಳಲಿಕ್ಕೆ ಅಂಜಿದಳು. ಅವಳ ಆ ಅಂಜೋಣವು ಆತ್ಮರಕ್ಷಣಕ್ಕಾಗಿರಲಿಲ್ಲ; ಶ್ರೀಕಂಠರಾಯನ ಆ ಮಹತ್ವದ ಕಾಗದ-ಪತ್ರಗಳಿಗಾಗಿತ್ತು. ಆದರಿಂದ ಆವಳು ಆ ಚಿಕ್ಕ ಪೆಟ್ಟಿಗೆಯನ್ನು ತನ್ನ ಪ್ರಾವರಣದ ಕೆಳಗೆ ಬಚ್ಚಿಟ್ಟುಕೊಂಡು ಕುಳಿತಿದ್ದಳು.

ಮದ್ದೂರಲ್ಲಿ ಬಹಳ ಹೊತ್ತಿನವರೆಗೆ ಗಾಡಿ ನಿಲ್ಲುವದರಿಂದ, ಹಾಗು ಆ ಸ್ಟೇಶನ್ನಿನ ಮೇಲೆ ಪ್ರಶಸ್ತಾದ ಹಿಂದೂ ಊಟದ ಹಾಗು ಫರಾಳದ ಅಂಗಡಿ ಇರುವದರಿಂದ ಬಹುಶಃ ಎಲ್ಲ ಪ್ಯಾಸೆಂಜರರೂ ಗಾಡಿಯಿಂದಿಳಿದು, ತಿಂಡಿ-ತೀರ್ಥಗಳಿಗೂ, ಕಾಫಿ-ದೋಸೆಗಳಿಗೂ ಆ ಹೋಟಲಿಗೆ ಹೋಗುವರು. ಆ ಸ್ಟೇಶನ್ನಿನಲ್ಲಾಗುತ್ತಿದ್ದ ಕಳವು-ಮೋಸಗಳಾದರೂ ಬಹುಶಃ ಇದೇ ಸಂಧಿಯಲ್ಲಿ ಆಗತಕ್ಕವು; ಸುಶೀಲೆಯು ತನ್ನ ಡಬ್ಬಿಯಲ್ಲಿ ಒಬ್ಬಳೇ ಕುಳಿತಿದ್ದಳು. ಅದರಿಂದ ಆಕೆಯು ಡಬ್ಬಿಯ ಕಿಟಕಿಯಲ್ಲಿ ಮೋರೆ ಹಾಕಿ, ಸ್ಟೇಶನ್ನಿನ ಕಡೆಗೆ ನೋಡುತ್ತ ಕುಳಿತಳು. ಗಾಡಿ ನಿಂತು ಬಹಳ ಹೊತ್ತಾದರೂ ಆಕೆಯು ಕುಳಿತಿದ್ದ ಆ ಡಬ್ಬಿಗೆ ಯಾರೂ ಬರಲಿಲ್ಲ. ಗಾಡಿ ಹೊರಡಲು ಇನ್ನು ಐದೇ ನಿಮಿಷಗಳುಳಿದವು. ಕಡೆಯ ವಾರ್ನಿಂಗ ಬೆಲ್ ಕೂಡ ಆಯಿತು. ಇಷ್ಟರಲ್ಲಿ ಒಬ್ಬ ಹೆಂಗಸು "ಹು-ಹು-ಹು" ಎಂದು ನಡುಗುತ್ತ, ಆ ಹೆಣ್ಣುಮಕ್ಕಳ ಡಬ್ಬಿಯ ಬಾಗಿಲ ತೆರೆದು ಒಳಹೊಕ್ಕಳು. ಆ ಹೆಣ್ಣುಮಗಳು ಮೈತುಂಬ ಒಂದು ಕೆಂಪುಬಣ್ಣದ ಕಾಶ್ಮೀರ ಶಾಲನ್ನು ಹೊತ್ತಿದ್ದಳು. ಆಕೆಯ ನಡಗೋಣ-ನರಳೋಣದರಿಂದ ಅವಳು ಬೇನೆಯುವಳಾಗಿರಬೇಕೆಂದು ಅನಿಸುತ್ತಿತ್ತು. ಒಳಗೆ ಹೊಕ್ಕವಳೇ ಒಂದು ಕತ್ತಲು ಗವಿದಿದ್ದ ಮೂಲೆಯ ಬಾಕಿನ ಮೇಲೆ ಅಡ್ಡಾಗಿ

ನೆರಳಹತ್ತಿದಳು. ತನ್ನ ಡಬ್ಬಿಯೊಳಗೆ ಬೇನೆಯು ಪಳೀ ಯಾಕಾಗಲೊಲ್ಲದು; ಸಂಗಡಿಗಳೊಬ್ಬಳು ಬಂದಳೆಂಬದನ್ನು ನೋಡಿ ಸುಶೀಲೆಗೆ ತುಸ ಆನಂದವಾಯಿತು.

ಒಂದು ನಿಮಿಷದಲ್ಲಿಯೇ ಆ ಹೊಸದಾಗಿ ಬಂದವಳ ನೆರಳೋಣವು ಮಿತಿಮೀರಿತು. ಅದನ್ನು ಕಂಡು ಸುಶೀಲೆಯ ಹೃದಯವು ಕಳವಳಗೊಂಡದ್ದರಿಂದ ಅವಳು ಆಕೆಯನ್ನು ಕುರಿತು:—ತಾಯಿ; ನಿಮಗೇನಾಗುತ್ತದೆ? ಎಲ್ಲಿಗೆ ಹೋಗಬೇಕಾಗಿದೆ? ಸಂಗಡ ಯಾರೂ ಇಲ್ಲವೆ? ಎಂದು ಪ್ರಶ್ನ ಮಾಡಿದಳು.

'ಏನು ಹೇಳಲೆವ್ವಾ' ಎಂದು ಇಕ್ಕಟ್ಟದ್ದ ಎಳೆದು ಮಾತಾಡುತ್ತ, ಆ ಹೆಣ್ಣುಮಗಳು:—ನಾನು ಮೈಸೂರವಳೇ. ಇಲ್ಲಿ ಯಜಮಾನರಿಗೆ ಕೆಲಸವಿರುವದರಿಂದ ಇಲ್ಲಿಗೆ ಬಂದಿದ್ದೆನು. ತಿಂಗಳೆರಡು ತಿಂಗಳಿಂದ ಚಳಿಜ್ವರ ಹಿಡಿದಿವೆ. ಯಜಮಾನರು ಇಂದೇ ಇಲ್ಲಿಂದ ೩೦ ಮೈಲಿನ ಮೇಲಿರುವ ಒಂದು ಊರಿಗೆ ತಮ್ಮ ಸರಕಾರೀ ಕೆಲಸಕ್ಕೆ ತೆರಳಿದ ಮೇಲೆ ಮೈಸೂರಿಂದ ಒಂದು ತಂತಿ ಬಂದಿತು. ಅಲ್ಲಿರುವ ನನ್ನ ಒಬ್ಬೊಂಟಿಗನಾದ ೧೭ ವರ್ಷದ ಮಗನು ಪ್ಲೇಗಿನಿಂದ ಬಳಲುತ್ತಿರುವನೆಂಬದು ಅದರಲ್ಲಿ ಬರೆದಿತ್ತು. ಇಂಥ ಸ್ಥಿತಿಯಲ್ಲಿ ಅದಾವ ತಾಯಿಯು ತಾನು ಜಡ್ಡಿನಿಂದ ಬಳಲುತ್ತಿದ್ದರೂ, ತನ್ನ ಗಂಡನು ಪರಸ್ಥಳಕ್ಕೆ ಹೋಗಿದ್ದರೂ ಸುಮ್ಮನೆ ಮನೆಯಲ್ಲಿ ಕುಳಿತಾಳು? ತಂತಿಯ ಸಂಗತಿಯನ್ನು ನಮ್ಮ ಯಜಮಾನರಿಗೆ ಜವಾನನ ಮುಖಾಂತರ ತಿಳಿಸಿ, ನಾನೊಬ್ಬಳೇ ನನ್ನ ಮಗನನ್ನು ನೋಡುವದಕ್ಕಾಗಿ ನಡೆದಿರುವೆನು; ಆದರೆ ತಂಗೀ, "ಘಾತವಾಯಿತು-ಘಾತವಾಯಿತು!" ಎಂದು ಅವಳು ಒಮ್ಮೆಲೆ ಚೀರಿದಳು.

ಅದೇನೆಂದು ಸುಶೀಲೆಯು ಅವಳ ಹತ್ತರವೇ ಹೋಗಿ ತನ್ನ ಕೈಪೆಟ್ಟಿಗೆಯನ್ನಿಟ್ಟು ಕುಳಿತು ಕೇಳಲು, ಆಕೆಯು ನುಡಿದಳೇನಂದರೆ:—ತಂಗೀ, ನನ್ನ ಕೈಯೊಳಗಿನ ಚಿಕ್ಕ ಗಂಟು ನಾನು ಕುಳಿತಿದ್ದ ಅಗೋ, ಅಲ್ಲಿ ಕಾಣುವ ಆ ಬೆಂಚಿನ ಮೇಲೆಯೇ ಉಳಿಯಿತು. ಅದರಲ್ಲಿ ನನ್ನ ಬೆಲೆಯುಳ್ಳ ವಸ್ತ್ರ-ಒಡವೆಗಳೂ ಕೆಲವು ನೋಟುಗಳೂ ಇವೆ. ನನಗಂತೂ, ಈಗ ಬಹಳ ಚಳಿಚಳಿಯಾಗಹತ್ತಿರುವದರಿಂದ ನಾನಿನ್ನು ಇಳಿಯಲಾರೆನು. ದೇವಾ, ಆ ನನ್ನ ಗಂಟು ನನಗೆ ಹೇಗೆ ದೊರಿತೀತು? ಎಂದಂದು ದೊಡ್ಡ ದನಿ ತೆಗೆದು ಅಳಲಾರಂಭಿಸಿದಳು. ಆಗಿನ ...ಣಾಪೂರ್ಣಸ್ಥಿತಿಯನ್ನು ಕಂಡು, ಎಂಥ ಕಲ್ಲೆದೆಯುವರ ಮನಸ್ಸೂ ...ಬಹುದಾಗಿದ್ದಿತು. ಅಂದಮೇಲೆ ನಮ್ಮ ಸುಶೀಲೆಯಂಥ ಸುಹೃದಯ...ಯ ಪಾಡೇನಾಗಬೇಕು? ಕೂಡಲೆ ಸುಶೀಲೆಯು ಅವಳಿಗೆ ಸಮಾಧಾನ... ಗಾಡಿಯಿಂದಿಳಿದು ಓಡುತ್ತೋಡುತ್ತ ಆ ಬೆಂಚಿನ ಬಳಿಗೆ ಹೋಗಿ ಅಲ್ಲಿ ...ಂಟನ್ನು ಹುಡುಕಹತ್ತಿದಳು.

ಇತ್ತ ಆ ಹೊಯ್ಕ್ಯಾಳೆಯಾದ ಹೆಂಗಸು ಸುಶೀಲೆಯು ಧಾವಿಸುತ್ತ ನಡೆದುದನ್ನು ನೋಡಿದವಳೇ ಅಲ್ಲಿದ್ದ ಸುಶೀಲೆಯು ಆ ಕೈಪೆಟ್ಟಿಗೆಯ ಕೀಲಿಗೆ ಕೈ ಹಾಕಿದಳು. ಅದರ ಕೀಲಿ ತಪ್ಪಿಸುವ ಸಾಧನಗಳು ಅವಳಲ್ಲಿದ್ದವು; ಆದರೆ ನಿದ್ದೆ ಬಂದವರಿಗೆ ಹಾಸಿಗೆ ಹಾಸಿ ಕೊಟ್ಟಂತೆ, ಆ ಪೆಟ್ಟಿಗೆಯು ಕೀಲಿಯು ಹಾಕದಿದ್ದದ್ದೇ ಅವಳಿಗೆ ಕಂಡಿತು. ಕೂಡಲೆ ಅವಳು ಅದನ್ನು ತೆರೆದು, ಉಳಿದ ಯಾವ ಸಾಮಾನುಗಳನ್ನೂ ಮುಟ್ಟದೆ, ಅದರಲ್ಲಿದ್ದ ಶ್ರೀಕಂಠನ ಆ ಮಹತ್ವದ ಕಾಗದ-ಪತ್ರಗಳ ಪುಡಿಕೆಯನ್ನು ತೆಗೆದುಕೊಂಡು ತನ್ನ ಬಗಲಲ್ಲಿ ಹಿಡಿದಿಟ್ಟಳು; ಹಾಗು ಆ ಪೆಟ್ಟಿಗೆಯ ಮುಚ್ಚಳವನ್ನು ಹಾಕಿ ಮೊದಲಿದ್ದಂತೆ ಇಟ್ಟುಬಿಟ್ಟಳು. ಅವಳು ಇಷ್ಟೆಲ್ಲ ಕೆಲಸವನ್ನು ನಿಮಿಷಾರ್ಧದಲ್ಲೇ ಮುಗಿಸಿ, ಮತ್ತೆ ಗಟ್ಟಿ ಗಟ್ಟಿಯಾಗಿ ನರಳುತ್ತ ತನ್ನ ಸ್ಥಳದಲ್ಲಿ ಬಿದ್ದುಕೊಂಡಳು ಗಾಡಿ ಹೊರಡುವ ವೇಳೆಯಾದ್ದರಿಂದ ಗಾರ್ಡನು "ಕೊಯಿ" ಎಂದು ಪೀಪಿಯೂದಿ, ತನ್ನ ಕೈದೀಪಕ್ಕೆ ಹಸರು ಕನ್ನಡಿಯನ್ನು ಹೊರಳಿಸಿ, ಅಲ್ಲಾಡಿಸಿ, ಡ್ರಾಯವ್ಹರನಿಗೆ ಗಾಡಿಬಿಡಲು ಸೂಚಿಸಹತ್ತಿದನು. ಅದನ್ನು ಕಂಡು ಪೋರ್ಟರನೂ ಗಾಡಿಬಿಡುವ ಗಂಟೆ ಬಾರಿಸಿದನು. ಆ ಕೂಡಲೆ ಡ್ರಾಯವ್ಹರನು ಸೀಟಿಕೊಟ್ಟು, ಎಂಜಿನ್ನಿನ ಬ್ರೆಕ್ಕು ತಪ್ಪಿಸಿ ಗತಿ ಕೊಟ್ಟನು. ಇಷ್ಟಾದರೂ ಸುಶೀಲೆಯು ಆ ಹೊಯ್ಕ್ಯಾಳೆಯ ಗಂಟನ್ನು ಆ ಬೆಂಚಿನ ಬಳಿ ಹುಡುಕುತ್ತಲೇ ಇದ್ದಳು. ಆಕೆಯು ಅದನ್ನು ಬಿಟ್ಟು ಬಂದಿದ್ದರೆ ತಾನೆ ಅದು ಇವಳಿಗೆ ಸಿಗಬೇಕಾದ್ದು? ಗಾಡಿಯು ಮುಂದಗತಿಯಿಂದ ಸಾಗಹತ್ತಲು, ಒಳಗೆ ಮಲಗಿದ್ದ ಆ ಹೆಂಗಸು ನರಳುವ ದನಿಯಿಂದಲೇ:—ತಂಗೀ, ಸಿಗದಿದ್ದರೆ ಇಲ್ಲ ಬೇಗನೆ ಬಂದು ಗಾಡಿ ಹತ್ತಿಕೋ, ಎಂದು ಕೂಗಿದಳು. ಸುಶೀಲೆಯು ತಡಪಡಿಸುತ್ತ ಹೇಗಾದರೂ ಮಾಡಿ ಗಾಡಿಯನ್ನೇರಿದಳು.

ಬಳಿಕ ಆ ಗಂಟು ಕಳೆದ ಬಗ್ಗೆ ಅವರೀರ್ವರೂ ಬಹಳ ಖೇದಗೊಂಡರು. ಆ ಹೆಣ್ಣುಮಗಳಂತೂ ಕೆಲಹೊತ್ತಿನ ವರೆಗೆ ಅತ್ತಳು ಸಹ; ಆದರೆ ಗಾಡಿಯು ಮುದ್ದೂರ ಸ್ಟೇಶನ್ನು ಬಿಟ್ಟ ೧೫ ನಿಮಿಷಗಳಲ್ಲೇ ಆಕೆಗೆ ನಿದ್ದೆ ಹತ್ತಲು, ಅವಳು ಗೊರಿಕೆ ಹೊಡಿಯಹತ್ತಿದಳು. ಹೆಚ್ಚಾದ ಆಯಾಸದಿಂದಲೂ, ಜಡ್ಡಿನ ತಾಮಸದಿಂದಲೂ ಇವಳಿಗೆ ತುಸ ನಿದ್ದೆ ಹತ್ತಿರಬಹುದೆಂದು ಬಗೆದು, ಅವಳನ್ನೆಬ್ಬಿಸುವ ಗೊಡವಿಗೆ ಹೋಗದೆ, ತನ್ನ ಕೈಪೆಟ್ಟಿಗೆಯನ್ನು ತನ್ನ ಪ್ರಾವರಣದಲ್ಲಿ ಮುಚ್ಚಿಕೊಂಡು ಸುಶೀಲೆಯು ಒಂದು ಮೂಲೆಗೆ ಆವಿತುಕೊಂಡು ಕುಳಿತಳು ಮುಂದೆ ಒಂದೆರಡು ಸ್ಟೇಶನ್ನುಗಳು ದಾಟುವಷ್ಟರಲ್ಲಿ ಅವಳಿಗೂ ಕುಳಿತುಕೊಂಡಿರುವಾಗಲೇ ಜಂಪುಹತ್ತಿತು.

ಗಾಡಿಯು ಹಿರೋಡೆಯಿಂದ ಪಟ್ಟಣಕ್ಕೆ ಬಂತು. ಆಗ ಬೆಳಗಿನ ಆರ

ಸಮಯ. ಇದಿ ಗಾಡಿಯೊಳಗಿನ ಬಹುತರ ಎಲ್ಲ ಜನರೂ ನಿದ್ರಾದೇವಿಯ ಹಸ್ತಗತರಾಗಿದ್ದರು. ಬಹು ಸ್ವಲ್ಪ ಜನರು-ತೀರ ವೃದ್ಧರು, ಯಾವದೊಂದು ಚಿಂತೆಯಿಂದ ಗ್ರಸ್ತರಾದವರು, ಪಟ್ಟಣಕ್ಕೇ ಇಳಿಯಬೇಕೆಂದು ಅದರ ಹಿಂದಿನ ಒಂದೆರಡು ಸ್ಟೇಶನ್ನುಗಳಲ್ಲಿ ಗಾಡಿಯನ್ನೇರಿದವರು-ಮಾತ್ರ ಎಚ್ಚತ್ತಿದ್ದರು. ನಮ್ಮ ಸುಶೀಲೆಗಂತೂ ಇದಿ ರಾತ್ರಿಯಲ್ಲಿ ನಿದ್ದೆಯಿಲ್ಲದ್ದರಿಂದ ಆ ವೇಳೆಯಲ್ಲಿ ಸಕ್ಕರೆ ಜಂಪು ಹತ್ತಿತ್ತು.

ಈ ಸುಸಂಧಿಯನ್ನು ಸಾಧಿಸಿ ಈ ಮೊದಲು ಆ ಹೆಣ್ಣುಮಕ್ಕಳ ಡಬ್ಬಿಯನ್ನೇರಿದ್ದ ಆ ಹೊಯ್ಮಾಲಿಯಾದ ಹೆಂಗಸು ಅಲ್ಲಿಂದ ಮೆಲ್ಲಗೆ ಇಳಿದು, ಬಾಗಿಲವನ್ನಿಕ್ಕಿ ಅಲ್ಲಿಗೆ ಬಹು ದೂರವಾಗಿದ್ದ ಬೇರೊಂದು ಕಂಪಾರ್ಟಮೆಂಟಿಗೆ ಹೋಗಿ ಕುಳಿತಳು. ಪಟ್ಟಣದಿಂದ ಹೊರಟ ಗಾಡಿಯು ಪಶ್ಚಿಮವಾಹಿನಿಯಲ್ಲಿ ಅಲ್ಲಿಗೆ ತೀರ್ಥ-ಯಾತ್ರೆಗೇಗಾಗಿ ಬಂದ ಪ್ರವಾಸಿಕರನ್ನು ಒಂದೆರಡು ನಿಮಿಷಗಳಲ್ಲಿಯೇ ಏರಿಳಿಸಿಕೊಂಡು, ಮೈಸೂರ ಕಡೆಗೆ 'ಫಕ್-ಫಕ್-ಫಕ್' ಎಂದು ಸಪ್ಪಳ ಮಾಡುತ್ತ ಸಾವಕಾಶವಾಗಿ ಸಾಗಿತು. ಪಟ್ಟಣದಿಂದ ಮೈಸೂರು ಒಂಬತ್ತೇ ಮೈಲಿದ್ದರೂ ಅಷ್ಟೇ ದಾರಿಯನ್ನು ಕ್ರಮಿಸಲಿಕ್ಕೆ ಆ ಶಟಲ್ಲುಬಂಡಿಗೆ ಸರಾಸರಿ ೫೦ ನಿಮಿಷಗಳು ಬೇಕಾಗುತ್ತವೆ ಹಾಗೂ ಹೀಗೂ ಮಾಡಿ ಆ ಬಂಡಿಯು ಮೈಸೂರ ಸ್ಟೇಶನ್ನಿಗೆ ೫॥ ಗಂಟೆಗೆ ಹೋಯಿತು. ಗಾಡಿ ನಿಲ್ಲುತ್ತಲೆ "ಸ್ವಾಮಿ, ಝಟಕಾ, ಸ್ವಾಮೀ, ಒಂಟೆತ್ತಿನ ಗಾಡಿ, ಮಿಸ್ಟರ, ಮೋಟಾರ ಎಂಬ ಬಾಡಿಗೆಯವರ ಕೂಗಾಟದಿಂದ ಮಲಗಿದ್ದ ಹಾಗು ತೂಕಡಿಸುತ್ತ ಕುಳಿತಿದ್ದ ಜನರು ಎಚ್ಚತ್ತರು. ಅವರು ತಮ್ಮ ಗಂಟು-ಮಟ್ಟೆಗಳನ್ನು ಸಾವರಿಸಿಕೊಂಡು ಇಳಿಯಲನುವಾದರು.

ಸ್ಟೇಶನ್ನಿನಲ್ಲಿ ಗಾಡಿಯು ಬಂದು ನಿಂತಕೂಡಲೆ ಪ್ರತಿಯೊಂದು ಡಬ್ಬಿಗೂ ಒಬ್ಬೊಬ್ಬನಂತೆ ತಿಕೀಟ ಕಲೇಕ್ಟರನು ಬಂದು, ಈ ಮೊದಲು ಪಶ್ಚಿಮವಾಹಿನಿಯೊಳಗೆ ಗಾಡಿಯ ಬಾಗಿಲುಗಳಿಗೆ ಹಾಕಿದ್ದ ಬೀಗಗಳನ್ನು ತೆಗೆದು, ಪ್ಯಾಸೆಂಜರರ ತಿಕೀಟುಗಳನ್ನು ಇಸಗೊಂಡು ಹೊರಗೆ ಬಿಡಹತ್ತಿದರು. ನಮ್ಮ ಸುಶೀಲೆಯೂ ಗಾಡಿಯಿಂದಿಳಿದಳು. ತನ್ನ ಡಬ್ಬಿಯೊಳಗಿನ ಆ ಜಡ್ಡಿನ ಹೆಣ್ಣುಮಗಳು ಇಳಿದಳೋ ಇಲ್ಲವೋ ಎಂಬದನ್ನು ನೋಡುವದು ಕೂಡ ಅವಳಿಗೆ ಆ ನಿದ್ದೆಯ ಭರದಲ್ಲಿ ನೆನಪಾಗಲಿಲ್ಲ. ಗಾಡಿಯಿಂದಿಳಿದು ಸ್ಟೇಶನ್ನಿನ ಹತ್ತರ ಸುಶೀಲೆಯು ಬರುವಷ್ಟರಲ್ಲಿ ಒಬ್ಬ ತಮಿಳದೇಶದವನು ಅವಳ ಬಳಿಗೆ ಬಂದು ಒಳ್ಳೇ ವಿಂಚಯದವನಂತೆ:—ಸುಶೀಲಾಬಾಯಿಯವರೇ, ನೀವಿಲ್ಲಿ ಬಹಳ ಹೊತ್ತು ನಿಲ್ಲಲಾಗದು. ಯಾರ ಕಣ್ಣಿಗಾದರೂ ನೀವು ಕಾಣಿಸಿಕೊಂಡರೆ ನಿಮ್ಮ ಹಾಗೂ ನಿಮ್ಮ ಪ್ರಿಯಕರ ಶ್ರೀಕಂಠರಾಯರ ಘಾತವಾಗದೆಯಿರದು. ನಿಮ್ಮನ್ನು ಕರೆದೊಯ್ಯಲಿಕ್ಕಾಗಿ

ಶ್ರೀಕಂಠರಾಯರೇ ಮೊಟ್ಟಾ ಬರತಕ್ಕವರಿದ್ದರು; ಆದರೆ ಅವರೊಂದು ವಿಶೇಷ ಕೆಲಸಕ್ಕಾಗಿ ಈಗಲೆ ಪೋಲೀಸಕಚೇರಿಗೆ ಹೊರಡುವಾಗ ನಿಮ್ಮನ್ನು ಕರೆತರುವ ಸಲುವಾಗಿ ನನಗೆ ಹೇಳಿ ಹೋದರು; ಅದರಿಂದ ನೀವು ಬೇಗನೆ ನಡೆಯಿರಿ; ಅಕೋ, ಆ ಹಸರು ಬಣ್ಣದ ಕಾರನ್ನೇರಿರಿ, ಎಂದೆಂದು ಅವನು ಅವಳ ಕೈಪೆಟ್ಟಿಗೆಯನ್ನಿಸಕೊಂಡು ಮುಂದೆ ಮುಂದೆ ಹೋಗಿ, ಆ ಹಸರು ಬಣ್ಣದ ಮೋಟಾರಿನ ಬಾಗಿಲ ತೆರೆದನು. ಕೂಡಲೆ ಸುಶೀಲೆಯು ಅದನ್ನು ಹತ್ತಿದಳು. ಆ ತಮಿಳನು ಡ್ರಾಯವ್ಹರನ ಬಳಿಯಲ್ಲಿ ಹೋಗಿ ಕೂಡ್ರಲು, ಮೋಟಾರಕಾರು ವೇಗದಿಂದ ಧಾವಿಸಲಾರಂಭಿಸಿತು.

ಆ ಕಾರಿನ ಸುತ್ತಲೂ ಪರದೆಗಳನ್ನಿಳಿಬಿಟ್ಟದ್ದರಿಂದಲೂ, ಆ ಚಾಮುಂಡಿ ಬೆಟ್ಟದ ತಪ್ಪಲುಪ್ರದೇಶದಲ್ಲಿ ಬೆಳಗಿನ ಝಾವದಲ್ಲಿ ಇಬ್ಬನಿ-ಮಂಜುಗಳು ಹೆಚ್ಚಾಗಿ ಬೀಳುವದರಿಂದಲೂ, ತಾನು ಕುಳಿತ ಮೋಟಾರಬಂಡಿಯು ಎತ್ತ ಸಾಗುವದೋ ಎಂಬದು ಸುಶೀಲೆಗೆ ತಿಳಿಯಲೇ ಇಲ್ಲ. ೪-೬ ಮಿನೀಟುಗಳ ವರೆಗೆ ಭರದಿಂದ ಸಾಗಿ ಆ ಗಾಡಿಯು ಒಂದು ಕಡೆಗೆ ಹೋಗಿ ನಿಂತಿತು. ಆ ತಮಿಳನು ಗಡಿಬಿಡಿಯಿಂದ ಬಂದು ಬಾಗಿಲ ತೆರೆದನು. ಸುಶೀಲೆಯು ಕೆಳಗಿಳಿದ ಕೂಡಲೆ ಆ ಮೋಟಾರಕಾರು ಎತ್ತಲೋ ಹೋಗಿ ಬಿಟ್ಟಿತು.

ಸುಶೀಲೆಯು ಕೆಳಗಿಳಿದು ನೋಡುತ್ತಾಳೆ, ತಾನು ಚಾಮರಾಜಪುರ ಸ್ಟೇಶನ್ನಿನ ಹತ್ತರವಾಗಲಿ, ಅರಮನೆಯ ಬಳಿಯ ತಮ್ಮ ಎಂಕ್ಯಾಮಾವನ ಬಂಗ್ಲೆಗಾಗಲಿ ಬಂದಿಲ್ಲವೆಂದೂ, ಮೈಸೂರ ಊರ ಹೊರಗೆ ಚಾಮುಂಡೀ ಬೆಟ್ಟದಡಿಯ ಯಾವುದೋ ಒಂದು ಹಳ್ಳಿಗೆ ಬಂದಿರುವೆನೆಂದೂ ತಿಳಿಯಿತು. ಆಗ ಆ ತಮಿಳನು:- ಬಾಯಿ, ಶ್ರೀಕಂಠರಾಯರು ಅಗೋ, ಅಲ್ಲಿ ಕಾಣುವ ಆ ಮೇಲಟ್ಟದ ಮೇಲಿರುತ್ತಾರೆ. ಬನ್ನಿರಿ, ಅಲ್ಲಿಗೆ ಹೋಗುವಾ, ಎಂದೆಂದು ಅವಳ ಆ ಕೈಪೆಟ್ಟಿಗೆಯನ್ನು ಹಿಡಕೊಂಡು ಮುಂದೆ ಸಾಗಿದನು. ಅವಳು ಮನಸ್ಸಿನಲ್ಲಿ ಅಂಜಿದ್ದರೂ ಹೊರಗೆ ತೋರಗೊಡದೆ, ಅವನ ಹಿಂದಿಂದೆ ನಡೆದಳು. ಆ ಮನೆಯು ಬಹು ಜೀರ್ಣವಾಗಿದ್ದಿತು; ಎಲ್ಲಿ ನೋಡಿದಲ್ಲಿ ಇಲ್ಲಾಣಗಳೂ, ಜಾಡನಪರಿಗಳೂ ಕಾಣುತ್ತಿದ್ದವು. ಅವಳು ಆ ತಮಿಳನ ಬೆನ್ನುಹತ್ತಿ ಆ ಮನೆಯ ಅಟ್ಟವನ್ನೇರಿದಳು. ಅಲ್ಲಿಗೆ ಹೋಗುತ್ತಲೆ ಅವಳ ಮೈ ಮೇಲೆ ರೋಮಾಂಚಗಳೆದ್ದವು. ಆ ಕೋಣೆಯಲ್ಲಿ ಯಾರೂ ಇರಲಿಲ್ಲ. ಆಗ ಆ ತಮಿಳನು ಅವಳನ್ನು ಅಲ್ಲಿ ಕೂರಿಸಿ:— ಬಾಯಿ, ಶ್ರೀಕಂಠರಾಯರು ಆ ಹೊರಗಿನ ಕೋಣೆಯಲ್ಲಿರಬಹುದಾಗಿದೆ; ಕರೆದು ಬರುತ್ತೇನೆಂದು ಹೇಳಿ ಹೊರಟು ಹೋದನು.

ಸುಶೀಲೆಯು ಕುಳಿತಿದ್ದ ಆ ಕೋಣೆಯು ಬಹು ಭಯಾನಕವಾಗಿದ್ದಿತು.

ಅದಕ್ಕೆ ಒಂದೇ ಬಾಗಿಲವಿತ್ತು. ಎತ್ತರದ ಮೇಲಿದ್ದ ಒಂದು ಕಿಟಕಿಯ ಕೆಳಗಿನ ಅರ್ಧಭಾಗಕ್ಕೆ ಹಲಿಗೆಗಳನ್ನು ಬಡಿದದ್ದರಿಂದ, ಹೊರಗಿನದೇನೂ ಕಾಣುವಂತಿರಲಿಲ್ಲ. ಎತ್ತರದಲ್ಲಿದ್ದ ಬೆಳಕಿಂಡಿಗಳಿಂದಲೇ ಆ ಕೋಣೆಗೆ ಬೆಳಕು ಬರುತ್ತಿತ್ತು. ಆ ಕವಿಳನು ಹೋಗಿ ಬಹಳ ಹೊತ್ತಾದರೂ ಅಲ್ಲಿಗೆ ಯಾರೂ ಬರಲಿಲ್ಲ. ಅದರಿಂದ ಸಂಶಯಗ್ರಸ್ತಳಾಗಿ ಅವಳು ಆ ಕೋಣೆಯ ಬಾಗಿಲಿಗೆ ಬಂದಳು. ಅಷ್ಟರಲ್ಲಿ ವಿಕಟಹಾಸ್ಯ ಮಾಡುತ್ತ, ಈ ಮೊದಲು ಎಂಕ್ಯಾಮಾನವನ ಬಂಗ್ಲೆಗೆ ಬಂದಿದ್ದ ನಾಮಧಾರಿ ಶ್ರೀಕಂಠನು-ಶಿತಿಕಂಠನು ಅಲ್ಲಿಗೆ ಬಂದನು. ಅವನನ್ನು ನೋಡಿದೊಡನೆ ಸುಶೀಲೆಯು ಬೆಚ್ಚಿಬಿದ್ದು ನಾಲ್ಕುಹೆಜ್ಜೆ ಹಿಂದಕ್ಕೆ ಸರಿದಳು. ಆಗ ಆ ನೀಚನು:—"ಸುಶೀಲೇ, ಅಂತೂ ನನ್ನ ತಂತಿಯು ನಿನಗೆ ಮುಟ್ಟಿ ನಿನ್ನನ್ನು ಇಲ್ಲಿಗೆ ಕರೆತಂದಿತಲ್ಲವೆ? ಆ ತಾರು ಮುಟ್ಟಿದೊಡನೆ ನೀನು ಬಂದೇ ಬರುವಿಯೆಂಬದು ನನಗೆ ಗೊತ್ತೇ ಇತ್ತು; ಆದರೆ ಸುಶೀ, ಇನ್ನು ಅಂಜುವ ಕಾರಣವಿಲ್ಲ. ಹಾಗು ಓಡಿಹೋಗುವ ಸಾಹಸಕ್ಕೆಳಗಾಗಬೇಡ. ನಾನು ನಿನ್ನನ್ನು ಒಳ್ಳೇ ಇಕ್ಕಟ್ಟಿನ ಸ್ಥಳದಲ್ಲಿ ತಂದಿಟ್ಟಿರುವದರಿಂದ, ನಿನ್ನ ಯಾವ ಯುಕ್ತಿ-ಹಂಚಿಕೆಗಳೂ ಇಲ್ಲಿಂದ ಹೋಗಲಿಕ್ಕೆ ನಿನಗೆ ಸಹಾಯಕಗಳಾಗವು; ಇಷ್ಟೇ ಅಲ್ಲ, ನೀನು ಎಲ್ಲಿರುತ್ತೀಯೆಂಬದು ಕೂಡ ನಿನಗೆ ತಿಳಿಯಲಾರದು. ನನ್ನ ವಿಶ್ವಾಸದ ಆ ಆರ್ಮೊಗಮ್‌ನು ಈ ಕೋಣೆಯ ಕಾವಲುಗಾರನಿರುವದರಿಂದ, ಇಲ್ಲಿಗೆ ನನ್ನ ಹೊರತು ಒಂದು ಹುಳವು ಕೂಡ ಬರಲಾರದು" ಎಂದನು.

ತಾನು ಮತ್ತೆ ಈ ನೀಚನ ಕೈಸೇರಿದುದರಿಂದ ಇನ್ನು ತನ್ನ ವಿಡಂಬನೆಯಾಗುವದು ಖಂಡಿತವೆಂದು ಅವಳ ಮನವರಿಕೆಯಾಯಿತು; ಆದರೆ ತಾನು ಬೆಂಗಳೂರಿಗೆ ಹೋದದ್ದೂ, ತಾನಿದ್ದ ಮನೆಯೂ ಇವನಿಗೆ ಹೇಗೆ ತಿಳಿಯಿತೆಂಬದರ ಗೂಢವು ಅವಳಿಗೆ ಗೊತ್ತಾಗಲಿಲ್ಲ. ಇನ್ನು ಪ್ರಸಂಗವು ಕಠಿಣವಾಗಿದ್ದರೂ ದೇಹದಲ್ಲಿ ಜೀವವಿರುವವರೆಗೂ ಇವನ ವಶಳಾಗಬಾರದೆಂದೂ, ಶಕ್ತಿಮೀರಿ ಹೆಣಗಿ ಇವನ ಕೈಯಿಂದ ಪಾರಾಗಬೇಕೆಂದೂ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು:- ನೀನು ನನ್ನನ್ನೇಕೆ ಇಲ್ಲಿಗೆ ಕರೆತಂದೆ? ನನ್ನಂಥ ಅಬಲೆಯನ್ನು ಹೀಗೆ ಮೋಸದಿಂದ ತರುವ ನಿನ್ನ ಉದ್ದೇಶವಾದರೂ ಯಾವದು? ಎಂದು ಸುಶೀಲೆಯು ಕ್ರೋಧಸಂತಪ್ತಳಾಗಿ ಪ್ರಶ್ನ ಮಾಡಲು,

"ಹುಚ್ಚ ಹುಡಗೀ" ಎಂದು ಗಹಗಹಿಸಿ ನಗುತ್ತ:—ನಿನ್ನಂಥ ರತಿದೇವಿಯಂತಿರುವ ಹರೆಯದ ಹೆಣ್ಣು ಮಗಳನ್ನು ನನ್ನಂಥ ಕೇವಲ ಮದನ ಸದೃಶ ತರುಣನು ಯಾತಕ್ಕೆ ಹರಣಮಾಡಿರುವನೆಂಬದನ್ನು ಬಾಯಿಂದ ಹೇಳುತ್ತ ಕೂಡ್ರದೆ, ಪ್ರತ್ಯಕ್ಷ ಕೇಳಿಯಾಟವನ್ನಾಡಿಯೇ ತೋರಿಸಬೇಕೆಂದಿರುವೆನು. ಯಾವ

ದಿನ ನೀನು ನನಗೆ ಎಲ್ಲಕ್ಕೂ ಮೊದಲು ಕಂಡೆಯೋ, ಅಂದೇ ನೀನು ನನ್ನ ಚಿತ್ತಹರಣ ಮಾಡಿರುತ್ತೀ. ಸುಶೀ, ನಿನ್ನಷ್ಟು ಸುಂದರ್, ನಿನ್ನಷ್ಟು ಮೋಹಕ್ಕ, ನಿನ್ನಂಥ ಶೃಂಗಾರ ರಸ ಪರಿಪ್ಲುತವಾದ ಹೆಣ್ಣನ್ನು ನಾನಿದುವರೆಗೆ ಎಲ್ಲಿಯೂ ನೋಡಿರುವುದಿಲ್ಲ. ನಿನ್ನ ಅಂಗಸಂಗಕ್ಕಾಗಿ ನಿನ್ನನ್ನು ಬಾಲ್ಯದಿಂದಲೂ ಸಾಕಿ ಸಲಹಿದ ನಮ್ಮ ದೊಡ್ಡಪ್ಪನಾದ ಎಂಕ್ಯಾಮಾವನಂತಹ ಅರವತ್ತು ವರುಷ ಮೀರಿದ ಮುದುಕನೇ ಹಾತೊರೆಯುತ್ತಿದ್ದಾಗ, ನನ್ನಂತಹ ಸುರೂಪ, ಸುಗುಣ, ನವತರುಣನಾದ ದೊಡ್ಡ ಅಧಿಕಾರಿಯು ನಿನಗಾಗಿ ಹುಚ್ಚನಾದರೆ ತಪ್ಪೇನು? ನೀನು ಬೆಂಗಳೂರಿಗೆ ಏಕೆ, ಸಪ್ತಲೋಕಗಳನ್ನು ದಾಟಿ ಹೋಗಿದ್ದರೂ, ನಿನ್ನನ್ನು ಹುಡುಕಿ ತರದೆ ನಿನ್ನ ಸಹವಾಸಕ್ಕಾಗಿ ಆತುರವಾಗಿದ್ದ ನನ್ನ ಪ್ರಾಣವು ಎಂದಿಗೂ ಸಮಾಧಾನ ಹೊಂದುತ್ತಿರಲಿಲ್ಲ."

"ನೀನು ಯಾವಾಗ ಎಂಕ್ಯಾಮಾವನ ಆ ಬಂಗ್ಲೆಗೆ ಬಂದಿಯೋ, ಅಂದಿನಿಂದಲೇ ನಿನ್ನ ಕಪಟಹೃದಯ-ನೀಚತನಗಳ ಮಟ್ಟು ನನಗೆ ಗೊತ್ತಾಗಿದೆ; ಮತ್ತು ಅದಕ್ಕಾಗಿಯೇ ನಿನ್ನ ಕಣ್ಮರೆಯಾಗುವದಕ್ಕೆಂದು ನಾನು ಬೆಂಗಳೂರಿಗೆ ಹೋದದ್ದು" ಎಂದು ಸುಶೀಲೆಯು ಹುಬ್ಬುಗಂಟಿಕ್ಕಿ ನುಡಿದಳು

"ನೀನು ನನ್ನ ಸಹವಾಸ ತಪ್ಪಿಸುವದಕ್ಕೆಂದು ಬೆಂಗಳೂರಿಗೆ ಹೋಗಿದ್ದೆಯೋ, ಮತ್ತೇತಕ್ಕೆ ಹೋಗಿದ್ದೆಯೋ ಎಂಬುದು ನನಗೆ ತಿಳಿಯದೆಂದು ಬಗೆದಿರುವೆಯಾ? ಅದಕ್ಕಾಗಿಯೇ ಹೋಗಿದ್ದರೆ, ನೀನು ಪುನಃ ನನ್ನ ತಂತಿಯ ಮುಬ್ಬಿಗೆ ಬಿದ್ದು, ನನ್ನ ಬಲೆಯಲ್ಲಿ ಬೀಳುತ್ತಿರಲಿಲ್ಲ."

"ನೀನು ನನ್ನನ್ನೇಕೆ ಪೀಡಿಸುವೆ? ನಾನೇನು ನಿನ್ನ ಗಂಟು ಎತ್ತಿಹಾಕಿರುವೆನೋ?"

"ಮತ್ತೇನು ಎತ್ತಿಹಾಕಬೇಕೆಂದಿರುವೆ? ನಿನ್ನಂತಹ ಸಾವಿರಾರು ಜನರಿಗೆ ಈ ಶಿತಿಕಂಠನು -(ದವಡೆ ಕಚ್ಚಿಕೊಂಡು) ಶ್ರೀಕಂಠನು-ಮಣ್ಣು ಮುಕ್ಕಿಸಿದವನು. ಸುಶೀ, ಮಾತಿಗೆ ಮಾತು ಬೆಳೆಸಿ, ಈ ಸುಸಮಯವನ್ನು ಹಾಳು ಮಾಡಬೇಕೆಂದು ನಾನಿಚ್ಛಿಸುವದಿಲ್ಲ. ನಿನ್ನಿಂದ ಬೇಕಾದ್ದನ್ನು ಅನಿಸಿ-ಆಡಿಸಿಕೊಳ್ಳಲಿಕ್ಕೆ ಇಲ್ಲಿಗೆ ನಿನ್ನನ್ನು ಕರೆತರಿಸಿಲ್ಲ. ಒಂದೇ ಏಟಿನಿಂದ ಎರಡು ಗುರಿಗಳನ್ನು ಹೊಡೆಯುವ ಉದ್ದೇಶವನ್ನಿಟ್ಟುಕೊಂಡು ನಿನ್ನನ್ನಿಲ್ಲಿಗೆ ತರಿಸಿದ್ದೇನೆ. ನಾನು ಕುಣಿಸಿದ ಹಾಗೆ ನೀನು ಕುಣಿಯಲೇ ಬೇಕು."

"ನಾನು ಹುಟ್ಟಾ ಹೆಣ್ಣುಮಗಳಿರುವದರಿಂದ ನಿನ್ನ ಬೆದರಿಕೆಗೆ ಅಂಜಿ, ನೀನು ಹೇಳಿದಂತೆ ನಡೆದೇನೆಂದು ತಿಳಿದಿರಬಹುದಾಗಿದೆ; ಆದರೆ ನಿನ್ನಂಥ ನೀಚನ ಇಚ್ಛೆಯಂತೆ ವರ್ತಿಸುವಷ್ಟು ಅವ್ಯಾಳಿಯು ನಾನಾಗಿರುವದಿಲ್ಲೆಂಬದನ್ನು

ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೋ."

"ನೀನು ಯಾವಾತನ ಮುಬ್ಬಿಗೆ ಬಿದ್ದು ಬೆಂಗಳೂರಿಗೆ ಹೋಗಿದ್ದೆಯೋ, ಅವನ ಭೆಟ್ಟಿಯಾದರೂ ಪುನಃ ನಿನಗಾದೀತೆಂದು ತಿಳಿದಿರುವೆಯಾ?"

"ಅಗತ್ಯವಾಗಿ ನಾನು ಅವರಿಗೆ ಭೇಟಿಯಾಗುವೆನು. ಎಂಕ್ಯಾಮಾವನ ನಿಜವಾದ ವಾರಸದಾರ ಶ್ರೀಕಂಠನು ನಾನೇ ಎಂದು ನೀನು ಎಷ್ಟು ಠಕ್ಕಿಸಲೆಳಿಸಿದರೂ, ನಿನ್ನ ಕಾರ್ಯವು ಕಡೆತನಕ ನಿರ್ವಿಘ್ನವಾಗದೆ ಸಾಗದು. ಶಿತಿಕಂಠ, ಪಾಪವನ್ನು ಎಷ್ಟು ಮುಚ್ಚುಮರೆಯಿಂದ ಮಾಡಿದರೂ, ಅದು ನಿಸರ್ಗದಿಂದಲೇ ಬೈಲಿಗೆಳೆಯಲ್ಪಡುತ್ತದೆ. ನೀನು ಯಾರು, ಎಂಥವನೆಂಬದೆಲ್ಲವೂ ನನಗೆ ಗೊತ್ತಾಗಿದೆ. 'ಉಂಡ ಮನೆಯ ಗಳ ಎಣಿಸುವ' ನಿನ್ನಂತಹ ನೀಚನ ಅಂತಃಕರಣವು ಕಾಲಕೂಟ ವಿಷದಂತೆ ತೀರ ಕಪ್ಪಾಗಿಯೇ ಇರುತ್ತದೆ. ನೀನು ಸಿಲೋನಿನಲ್ಲಿ ಆ ಶ್ರೀಕಂಠರಾಯರಿಗೇನೇನು ಕೇಡು ಬಗೆದಿರುವಿಯೆಂಬದೆಲ್ಲವೂ ನನಗೆ ತಿಳಿದದೆ. ನಿನ್ನ ಪಾಪದ ಮಾಪು ತುಂಬುತ್ತ ಬಂದಿದೆ. ಅಲ್ಪಾವಕಾಶದಲ್ಲಿಯೇ ಅದರ ಯೋಗ್ಯ ಪ್ರಾಯಶ್ಚಿತ್ತವು ನಿನಗೆ ದೊರತೇ ದೊರೆಯುವದು."

"ಹುಚ್ಚ ಹುಡುಗೀ, ಆ ಒಟ್ಟನ್ನ ಮೊಗದ ತರುಣನು ನಿನ್ನನ್ನೊಳ್ಳೇ ಮುಬ್ಬಿಗೆ ಕೆಡವಿರುವನು. ಇಲ್ಲದ-ಸಲ್ಲದ ಸಂಗತಿಗಳನ್ನು ಹೇಳಿ, ನಿನ್ನ ಅವಿಚಾರತನಕ್ಕೆ ಕಳೆದುಂಬಿರುವನು. ನಮ್ಮ ಎಂಕ್ಯಾಮಾವನ ಕೊಲೆಯನ್ನು ನಿನ್ನ ಸಹಾಯದಿಂದ ಆ ನೀಚನೇ ಮಾಡಿರುವನು. ಎಂಕ್ಯಾಮಾವನ ನಿಜವಾದ ವಾರಸದಾರನಾರೆಂಬದು ಪೋಲೀಸರಿಗೆ ಈ ಮೊದಲೇ ಖಾತ್ರಿಮಾಡಿಕೊಟ್ಟಿರುವೆನು. ಇನ್ನು ಒಂದೇ ಮಾತಿನ ನಿಷ್ಕರ್ಷವಾಗುವದುಳಿದಿದೆ. ಅದಾಯಿತೆಂದರೆ, ಖರೇ ಶ್ರೀಕಂಠನಾರು? ನಾಮಧಾರಿ ಯಾರು? ಎಂಬದು ತಾನೇ ಬೈಲಿಗೆ ಬರುವದು. ಆ ಬಳಿಕ ನನ್ನೊಡನೆ ಇಷ್ಟು ಕಠೋರತನದಿಂದ ವರ್ತಿಸಿದ ಬಗ್ಗೆ ನಿನಗೆ ಪಶ್ಚಾತ್ತಾಪವಾಗದಿರದು. ತದನಂತರ ನೀನು ನನ್ನ ಕೈ-ಕಾಲುಗಳನ್ನು ಹಿಡಕೊಂಡು ಶಿರಗೊಡ್ಡಿ ಬೇಡಿಕೊಂಡರೂ ನಾನು ನಿನ್ನನ್ನು ಕ್ಷಮಿಸಲಿಕ್ಕಿಲ್ಲ. ಆ ನೀಚನ ಸಹಾಯಕಳೆಂದು ಎಂಕ್ಯಾಮಾವನ ಕೊಲೆಯ ಆರೋಪವನ್ನು ನಿನ್ನ ಮೇಲೆಯೂ ಹೊರಿಸಿ, ನಿನಗೆ ಆಜನ್ಮ ಕರಿನೀರಿನ ಶಿಕ್ಷೆ ಕೊಡಿಸೇನು. ನೀನು ಕುಲೀನಳೂ, ಶೀಲವಂತಳೂ ಎಂದು ತಿಳಿದು, ನನ್ನ ವಾರಸಾ ಹಕ್ಕಿನ ಮಹತ್ವದ ಕಾಗದಗಳ ಟ್ರಂಕನ್ನು ನಿನ್ನ ಕೋಣೆಯಲ್ಲಿಟ್ಟಿದ್ದೆನು; ಆದರೆ ನೀನು ಆ ಠಕ್ಕನ ಹರಿಗೆ ಬಿದ್ದು, ಅವನ ಸಹಾಯದಿಂದ ಆ ಕಾಗದ-ಪತ್ರಗಳನ್ನು ಕಳವು ಮಾಡಿಕೊಂಡು ಅವನೊಡನೆ ಹೊರಟು ಹೋದಿ; ಹಾಗು ಅದೇ ರಾತ್ರಿ ಅವುಗಳನ್ನು ತಕ್ಕೊಂಡು ಬೆಂಗಳೂರಿಗೆ ನಡೆದೆ. ನೀನು ನಿನ್ನ ಕೋಣೆಯಲ್ಲಿ ಮಲಗಿರಬಹುದೆಂದೂ, ನಿನಗೆ

ಸುಷುಪ್ತಿಯಲ್ಲಿ ನಾನು ಮಲಗಿದ್ದಾಗ ನೀನು ಕೋಣೆಯೊಳಗೆ ಬಂದು ನನ್ನ ಪೆಟ್ಟಿಗೆಯ ಕೀಲಿಕೈಯನ್ನು ತೆಗೆದುಕೊಳ್ಳಬೇಕೆಂದು ಯೋಚಿಸಿದ್ದೆ. ಆದರೆ ನೀನು ಕೇಳಿದರೆ ಕೊಡಬಾರದೆಂದೂ ತಿಳಿದು ನಾನು ಬೇರೆ ಕೋಣೆಯಲ್ಲಿ ಮಲಗಿದ್ದೆನು. ಆ ರಾತ್ರಿಯಲ್ಲಿ ನಾನು ನಿದ್ದೆಯನ್ನೇ ಮಾಡಬಹುದಿತ್ತು; ಆದರೆ ಯಾವ ಕಾರಣದಿಂದಲೋ ಅಂದು ನನಗೆ ಒಳ್ಳೇ ಗಾಢನಿದ್ರೆ ಹತ್ತಿತು. ನಾನು ಬೆಳಗ್ಗೆ ಎದ್ದು ಉಪವನದಲ್ಲಿ ಅಡ್ಡಾಡುತ್ತಿರಲು, ನಿನ್ನ ಕೋಣೆಯು ಆ ಬದಿಯ ಕಿಟಕಿಯ ಬಾಗಿಲು ತೆರೆದದ್ದು ನನಗೆ ಕಂಡಿತು. ಕೂಡಲೆ ನಾನು ಹಣಿಕಿ ಹಾಕಿದೆನು. ನೀನು ಅಲ್ಲಿರುವಂತೆ ಕಾಣಲಿಲ್ಲ. ತತ್‌ಕ್ಷಣವೇ ನಾನು ಆ ಕಿಟಕಿಯೊಳಗಿಂದಲೇ ಒಳಗೆ ಹಾರಿ ನನ್ನ ಟ್ರಂಕಿನ ಕೀಲಿ ತೆಗೆದು ನೋಡುತ್ತೇನೆ, ಅಲ್ಲೇನಿದೆ ಮಣ್ಣು! ಆ ಟ್ರಂಕಿನೊಳಗಿನ ಎಲ್ಲ ಸಾಮಾನುಗಳು ಇದ್ದು, ಆ ಕಾಗದ-ಪತ್ರಗಳ ಪುಡಿಕೆಯೊಂದೇ ಕಾಣದ್ದರಿಂದ, ವಿಶ್ವೇಶ್ವರ ನೀಚಕೃತ್ಯವು ನನ್ನ ನಿದರ್ಶನಕ್ಕೆ ಬಂತು. ನೀನು ಈ ಮೊದಲೇ ಅವನ ಮುಬ್ಬಿಗೆ ಬಿದ್ದು ಎಂಕ್ಯಾಮಾವನ ಖೂನಿ ಮಾಡಿರಬಹುದೆಂದು ಅನಿಸುತ್ತಿದ್ದ ನನ್ನ ಮನಸ್ಸಿನ ಕಲ್ಪನೆಯು ದೃಢವಾಯಿತು. ನೀನೊಬ್ಬಳೇ ಕದ್ದಿದ್ದರೆ ಆ ಕಾಗದ-ಪತ್ರಗಳು ನಿನಗೇತಕ್ಕೆ ಬರಬೇಕು? ಬೇರೆ ಯಾವನೊಬ್ಬ ಕಸಬುದಾರ ಕಳ್ಳನೇ ಕಳವು ಮಾಡಿದ್ದರೆ, ಅವನು ಆ ಟ್ರಂಕಿನೊಳಗಿನ ಬೆಲೆಯುಳ್ಳ ಜಿನಸೊಂದನ್ನೂ ಮುಟ್ಟದೆ, ಆ ಕಾಗದಗಳನ್ನೇ ಏಕೆ ಒಯ್ಯುತ್ತಿದ್ದನು? ಹೀಗೆ ಯಾವ ಪ್ರಕಾರವೂ ಸಂಭವಿಸದ್ದರಿಂದಲೇ ನಿನ್ನ ಸಹಾಯದಿಂದ ಆ ನಾಮಧಾರಿಯು ನನ್ನ ಕಾಗದ-ಪತ್ರಗಳನ್ನು ಎತ್ತಿಹಾಕಿರುವನೆಂಬದು ನನಗೆ ತಿಳಿಯಿತು. ತನ್ನ ಈ ಕೃತಿಯ ಮೇಲೆ ನನ್ನ ಲಕ್ಷ್ಯವಿರಲಿಕ್ಕಿಲ್ಲೆಂದೂ ಅವನು ತಿಳಿದಿರಬಹುದು; ಆದರೆ ಅವನ ಪ್ರತಿಯೊಂದು ಕೃತ್ಯವನ್ನೂ ನಾನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡುತಲಿದ್ದೇನೆ. ಅವನು ಪೋಲೀಸರ ಕಡೆಗೆ ನಡಿಸಿರುವ ಸಂಧಾನವು ನನಗೆ ಸಂಪೂರ್ಣವಾಗಿ ಗೊತ್ತಾಗಿದೆ. ಅಂತೇ ನಾನೊಬ್ಬ ಚಾಣಾಕ್ಷ ಮನುಷ್ಯನನ್ನು ಗುಪ್ತ-ಪೋಲೀಸರ ಇನ್ಸಪೇಕ್ಟರನ ವೇಷದಿಂದ ಅವನೆಡೆಗೆ ಕಳಿಸಿ, ಅವನಿಗೆ ನಾನಾಬಗೆಯ ಆಮಿಷಗಳನ್ನು ತೋರಿಸಿ, ನಿನ್ನ ಅವನ ಗುಪ್ತಕಾರಸ್ಥಾನವನ್ನು ತಿಳಕೊಂಡೆನು; ಅಲ್ಲದೆ ನಿನ್ನ ಬೆಂಗಳೂರ ಪತ್ರ. ನಿನಗೆ ಅವನು ಕಳಿಸಬೇಕಾಗಿದ್ದ ತಂತಿಯ ಸಂಗತಿ ಮುಂತಾದವುಗಳನ್ನು ತಿಳಕೊಂಡೆನು. ಬಳಿಕ ನಿನ್ನ ಹೆಸರಿಗೆ ತಂತಿ ಕೊಟ್ಟೆನು. ಆ ತಾರು ಮುಟ್ಟಿದ ಕೂಡಲೆ ನೀನು ಬಂದೇಬರುವಿಯೆಂಬದು ನನ್ನ ಖಾತ್ರಿಯಿದ್ದುದರಿಂದ, ನಾನು ನನ್ನ ಅತ್ಯಂತ ವಿಶ್ವಾಸದ ಅವರ್ಗಗಮ್‌ನನ್ನು ಸ್ಟೇಶನ್ನಿಗೆ ಕಳಿಸಿ, ನಿನ್ನನ್ನು ಇಲ್ಲಿಗೆ ಹಿಡತರಿಸಿರುವೆನು. ಇನ್ನು ನೀನು ನನ್ನ ಕೈಯೊಳಗಿಂದ ಪಾರಾಗುವ ಆಶೆಯನ್ನೇ ಹಿಡಿಯಬೇಡ. ಪೋಲೀಸರಿಗೆ ನನ್ನ ವಾರಸಾ ಹಕ್ಕಿನ ಖಾತ್ರಿ ಮಾಡಿಕೊಟ್ಟಿರುವದರಿಂದ, ಎಂಕ್ಯಾ

ಮಾವನ ಆ ಬಂಗ್ಲೆ ಮುಂತಾದ ಎಲ್ಲ ಆಸ್ತಿಯೂ ನನ್ನ ಸ್ವಾಧೀನವಾದಂತಾಗಿದೆ. ಇನ್ನು ಆ ಕಾಗದ-ಪತ್ರಗಳನ್ನಷ್ಟು ಹಾಜರ ಮಾಡಿದೆನೆಂದರೆ ಅವನ ಉಳಿದ ಆಸ್ತಿ, ಬ್ಯಾಂಕಿನೊಳಗಿನ ಲಕ್ಷಾಂತರ ರೂಪಾಯಿಗಳ ಠೇವು ಇತ್ಯಾದಿಗಳು ನನ್ನ ವಶವಾಗುವವು. ಎಂಕ್ಯಾಮಾವನನ್ನು ಕೊಲೆ ಮಾಡಿದವನು ಆ ನಾಮಧಾರಿಯ ಹೊರತು ಅನ್ಯರಾರೂ ಇರುವದಿಲ್ಲೆಂಬದು ನನ್ನಂತೆ ಪೋಲೀಸರಿಗೂ ಖಾತ್ರಿಯಾಗಿದೆ ಅಂತೇ ಈಗ ನಿನ್ನ ಕೈಪೆಟ್ಟಿಗೆಯಲ್ಲಿರುವ ಆ ಕಾಗದ-ಪತ್ರಗಳನ್ನು ಪೋಲೀಸರಿಗೆ ತೋರಿಸಿ, ಅವನನ್ನು ಗಲ್ಲಿಗೇರಿಸುವ ಏರ್ಪಾಟು ಮಾಡುತ್ತೇನೆ.

"ಎಂಕ್ಯಾಮಾವನ ಕೊಲೆಯು ಆ ಶ್ರೀಕಂಠರಾಯರಿಂದ ಆಗಿಲ್ಲ. ಅವರ ಕೊಲೆಯನ್ನು ಯಾರು ಮಾಡಿರುವರೆಂಬದು ನಿನ್ನದು ನಿನಗೇ ಗೊತ್ತು."

"ನಿನ್ನಂಥ ಮುಗ್ಧೆಯನ್ನು ಮೋಸಗೊಳಿಸಲಿಕ್ಕೆ ಆ ಕಪಟ ವೇಷಧಾರಿಗೆ ಎಷ್ಟು ಅವಕಾಶ ಹಿಡಿದೀತು? ಅವನು ಎಂಕ್ಯಾಮಾವನನ್ನು ಕೊಲ್ಲದಿದ್ದರೆ ಅಂದು ರಾತ್ರಿ ತಾನೇ ಖುದ್ದಾಗಿ ಪೋಲೀಸ ಸ್ಟೇಶನ್ನಿಗೆ ಹೋಗಿ, ಆ ಕೊಲೆಯ ಸುದ್ದಿಯನ್ನೇಕೆ ತಿಳಿಸಲಿಲ್ಲ? ಅವನು ನಿರ್ದೋಷಿಯೇ ಆಗಿದ್ದರೆ ಹೀಗೆ ಕದ್ದು-ಮುಚ್ಚಿ ಏಕೆ ವ್ಯವಹರಿಸುವನು? ಧಡ್ಡು ಹೊಡೆದು ಸಮರಾಂಗಣದ ಮೇಲೇಕೆ ಬರುವದಿಲ್ಲ? ಯಾವನು ತಪ್ಪೇ ಮಾಡಿಲ್ಲವೋ, ಅವನಿಗೆ ಅಂಜಿಕೆಯಾದರೂ ಯಾತರದು? ಅವಿರಲಿ, ಆ ಮಾತಿನ ಸತ್ಯಾಸತ್ಯಗಳು ಪೋಲೀಸರಿಂದೇ ಬೈಲಿಗೆ ಬರುವವು. ಅದಕ್ಕಾಗಿ ನಾನೂ ನೀನೂ ತಲೆ ಒಡಕೊಳ್ಳುವದೇಕೆ? ಸುಶೀ, ನನಗೆ ಅದೆಲ್ಲ ಬೇಡಾಗಿದೆ; ನನಗೆ ಈ ಗುಲಾಬಿ ಹೂವಿನಂತಹ ಸುಕೋಮಲ ಸುಶೀಲೆಯು ಬೇಕಾಗಿರುತ್ತಾಳೆ. ನನ್ನ ಅಂತಃಕರಣದೊಳಗಿನ ಕಾಮೇಚ್ಛೆಯನ್ನು ತೃಪ್ತಿಗೊಳಿಸುವ ಕಾಮಿನಿಯು ಬೇಕಾಗಿರುತ್ತಾಳೆ. ಆದ್ದರಿಂದ ನಾನು ನಿನ್ನೊಡನೆ ವಾದಿಸ್ಯಾಡಿ-ನ್ಯಾಯಾಡಿ ಈ ಬಂಗಾರದಂಥ ಸುಸಮಯವನ್ನೇಕೆ ಕಳಕೊಳ್ಳಲಿ? ಸುಶೀ, ನಿನ್ನ ಇಚ್ಛೆಯಿರಲಿ, ಇರದಿರಲಿ; ನಿನಗೆ ನಾನು ಸೇರಲಿ, ಸೇರದಿರಲಿ; ಅವುಗಳ ಬಗ್ಗೆ ನಾನು ಕೊಂಚವೂ ಲಕ್ಷ್ಯಗೊಡುವದಿಲ್ಲ. ನಾನು ಜಗತ್ತಿನೊಳಗಿನ ಪ್ರೇಮ-ಗೀಮುಗಳಿಗೆ ಎಳ್ಳಷ್ಟೂ ಮಹತ್ವ ಕೊಡುವವನಲ್ಲ. ನೀನು ಸುಖಸಮಾಧಾನದಿಂದ ನನ್ನ ಇಚ್ಛೆಯನ್ನು ಪೂರೈಸಲಿಕ್ಕೆ ಸಿದ್ಧಳಾದರೆ, ಕಬ್ಬಿಗೆ ಜೇನು ಇಟ್ಟಂತಾಗುವದು. ನೀನು ಒಪ್ಪದಿದ್ದರೆ, ಒತ್ತಾಯದಿಂದ-ಜಬರಿಯಿಂದ-ನಿನ್ನನ್ನು ಭೋಗಿಸಿಯೇ ತೀರುವೆನು."

"ಕಾಪುರುಷಾ, ಹಕ್ಕಿಯಲ್ಲಿ ಗೂಟಕ್ಕೆ ಕಟ್ಟಿದ ಆಕಳ ಶಿರಚ್ಛೇದ ಮಾಡುವವನು ಯಾವ ಕೋಟೆಯಲ್ಲಿ ಸೇರುವನೋ, ನೀನೂ ಅದೇ ಕೋಟಿಯೊಳಗಿನವನು."

"ನಾನು ಎಂಥವನೆಂಬದನ್ನು ಸ್ವಾನುಭವದಿಂದಲೇ ನಿನಗೆ ತಿಳಿಯುವಂತೆ ಮಾಡುವೆನು. ಅದಿರಲಿ, ನೀನು ನನ್ನ ಟ್ರಂಕಿನೊಳಗಿಂದ ಎತ್ತಿ ಹಾಕಿದ ಕಾಗದ-ಪತ್ರಗಳ ಪುಡಿಕೆಯಲ್ಲಿದೆ? ಬಹುಶಃ ಅದು ನಿನ್ನ ಈ ಕೈಪೆಟ್ಟಿಗೆಯಲ್ಲಿಯೇ ಇರಲಿಕ್ಕೆ ಸಾಕು" ಎಂದೆಂದು, ಅವನು ಅಲ್ಲಿಯೇ ಸಮೀಪದಲ್ಲಿದ್ದ ಆಕೆಯ ಕೈಪೆಟ್ಟಿಗೆಯನ್ನು ತಕ್ಕೊಂಡು ಅದನ್ನು ತೆಗೆಯಹತ್ತಿದನು. ಅದಕ್ಕೆ ಕೀಲಿ ಹಾಕದ್ದರಿಂದ ಅದು ಸಹಜವಾಗಿ ತೆರೆಯಿತು.

ಕೀಲಿಯು ಸಹಜವಾಗಿ ಹೊರಟದ್ದನ್ನು ನೋಡಿ ಶಿತಿಕಂಠನಂತೆ ಸುಶೀಲೆಗೂ ಆಶ್ಚರ್ಯವಾಯಿತು. ಕೈಯು ತನ್ನ ಬಳಿಯಲ್ಲಿದ್ದು, ಇದರ ಕೀಲಿಯನ್ನು ಯಾರು ಹಾಗು ಯಾವಾಗ ತೆಗೆದರೆಂಬುವದು ಅವಳಿಗೆ ತೋಚದಾಯಿತು. ಶಿತಿಕಂಠನು ಪೆಟ್ಟಿಗೆಯನ್ನು ತೆರೆದು ಒಳಗೆ ನೋಡುತ್ತಾನೆ; ಅಲ್ಲಿ ಕೆಲವು ರೂಪಾಯಿ, ಒಂದೆರಡು ಪೋಲಕಾ, ಒಂದು ಸೀರೆ ಇವುಗಳ ಹೊರತು ಏನೂ ಕಾಣಿಸಲಿಲ್ಲ. ಅವನು ಮೂರು ಮೂರು ಸಾರೆ ಅದನ್ನು ತೆಗೆತೆಗೆದು ನೋಡಿದನು. ಮೇಲೆ ವಿವರಿಸಿದ ಸಾಮಾನುಗಳ ಹೊರತು ಅದರಲ್ಲೇನೂ ದೊರೆಯಲಿಲ್ಲ. ಕಡೆಗೆ ಅವನು ಸುಶೀಲೆಯ ಕಡೆಗೆ ಕೆಂಪಡರಿದ ಕಣ್ಣುಗಳಿಂದ ನೋಡುತ್ತ:—"ನೀನು ಒಳ್ಳೇ ಸುಂದರಿಯಿರುವಂತೆ, ಮಹಾ ಮೋಸಗಾರ್ತಿಯೂ ಇರುತ್ತಿ. ಅಂತೇ [illegible] ಆ ನನ್ನ ಜೀವದ ಇಡಿಗಂಟಾದ-ಮಹತ್ವದ ಕಾಗದ-ಪತ್ರಗಳ ಪುಡಿಕೆಯನ್ನು [illegible] ಮಾಯ ಮಾಡಿರುವೆ. ಸುಶೀ, ನಿನ್ನಂಥ ಹುಡುಗಿಯ ಕಾರಸ್ಥಾನಗ[illegible] ಈ ಶಿತಿಕಂಠನು ಬಿಕ್ಕೆ ಹಾಕುವವನಲ್ಲ. ಛಲೋ ಮಾತಿನಿಂದ ನೀನು ಆ ಪುಡಿ[illegible]ನ್ನು ಎಲ್ಲಿಟ್ಟು ಬಂದೆಯೆಂಬದನ್ನು ಹೇಳು; ಇಲ್ಲದಿದ್ದರೆ ಅದರ ಪರಿಣಾಮವು ನಿನಗೆ ಭಯಂಕರವಾಗಿ ತೋರದಿರದು." ಎಂದನು.

ಆ ಕೂಡಲೆ ಸುಶೀಲೆಯು ಆ ಕೈಪೆಟ್ಟಿಗೆಯನ್ನು ತಕ್ಕೊಂಡು, ಅದನ್ನು ತೆರೆತೆರೆದು ನೋಡಿದಳು. ಅದರೊಳಗೆ ಆ ಕಾಗದ-ಪತ್ರಗಳ ಪುಡಿಕೆಯಿರದ್ದನ್ನು ಕಂಡು ಅವಳು ಹುಚ್ಚುಮಂಗನಂತಾದಳು. "ಆ ಪುಡಿಕೆಯು ಕಳವಾಗಿ ಹೋಯಿತಲ್ಲವೆ?" ಎಂಬ ಆಶ್ಚರ್ಯೋದ್ಗಾರವು ಅವಳ ಬಾಯಿಂದ ಸಹಜವಾಗಿ ಹೊರಹೊರಟಿತು.

ಸುಶೀ, ಈ ಕಣ್ಣುಮುಚ್ಚಾಣಿಕೆಯನ್ನು ಇನ್ನು ಸಾಕು ಮಾಡು; ಹಾಗು ಆ ಪುಡಿಕೆಯನ್ನೆಲ್ಲಿ ಬಚ್ಚಿಟ್ಟಿರುವೆಯೆಂಬದನ್ನು ತಿಳಿಸು. ನೀನು ನನ್ನನ್ನಿನ್ನೂ ಚನ್ನಾಗಿ ಗುರುತಿಸಿರುವದಿಲ್ಲ. ಯಾವುದೊಂದು ಸಂಗತಿಯನ್ನು ಮಾಡಬೇಕೆಂದು ನಾನು ಮನಸ್ಸಿನಲ್ಲಿ ತಂದರೆ, ಅದಕ್ಕೆ ಬೇಕಾದಷ್ಟು ಜನ ಅತಿರಥಿ-ಮಹಾರಥಿಗಳು ಅಡ್ಡಬಂದರೂ, ನಾನು ಅವರೆಲ್ಲರ ಕುತ್ತಿಗೆಗಳ ಮೇಲೆ ಕತ್ತಿಯನ್ನಿಟ್ಟು

ನನ್ನ ಕಾರ್ಯವನ್ನು ಸಾಧಿಸಿಕೊಳ್ಳತಕ್ಕವನೇ. ಬಹಳವೇಕೆ; ಈ ಕಾಗದಗಳ ಪುಡಿಕೆಗಾಗಿ ನಿನ್ನ ಗೋಣನ್ನು ಮುರಿಯುವ ಪ್ರಸಂಗ ಬಂದರೂ, ಒಂದೇಸಾರೆ ನಿನ್ನನ್ನು ಉಪಭೋಗಿಸಿ, ನಿನ್ನನ್ನು ಗೊತ್ತಿಗೆ ಹಚ್ಚಲಿಕ್ಕೂ ನಾನು ಹಿಂದು ಮುಂದು ನೋಡತಕ್ಕವನಲ್ಲ. ಆದ್ದರಿಂದ ಆ ಪ್ರಸಂಗವುಂಟಾಗದಂತೆ ಕಾಗದ ಗಳ ಪುಡಿಕೆಯೆಲ್ಲಿದೆಯೆಂಬದನ್ನು ತಿಳಿಸು."

"ಆ ಬಗ್ಗೆ ನಾನು ಆಗಲೆ ಹೇಳಿದ್ದೇ ನಿಜವು. ಅದು ಎಲ್ಲಿ ಹಾಗು ಯಾವಾಗ ಕಳವಾಯಿತೆಂಬದೇ ನನಗೆ ತಿಳಿಯದು. ಬೆಂಗಳೂರ ಸ್ಟೇಶನ್ನಿಗೆ ಬರುವಾಗ ಮೋಟಾರಿನಲ್ಲಿ ಕುಳಿತಾಗ. ಆ ಕಾಗದ-ಪತ್ರಗಳ ಪುಡಿಕೆಯು ಈ ಟ್ರಂಕಿನಲ್ಲಿತ್ತು. ಮುಂದೇನಾಯಿತೆಂಬದು ನನಗೆ ಗೊತ್ತೇ ಇಲ್ಲ."

ಸುಶೀಲೆಯು ಮಾತಾಡುತ್ತಿರುವಾಗ ಶಿತಿಕಂಠನು ಅವಳ ಮುಖಲಕ್ಷಣ, ಹಾವ-ಭಾವಗಳ ಕಡೆಗೆ ಚೆನ್ನಾಗಿ ಲಕ್ಷ್ಯಗೊಟ್ಟಿದ್ದನು. ಅವಳ ಮಾತಿನಲ್ಲಿ ಅಸತ್ಯ ವಿಲ್ಲೆಂಬದು ಅವನ ಖಾತ್ರಿಯಾಯಿತು. ಆ ಕಾಗದ-ಪತ್ರಗಳು ಗಾಡಿಯಲ್ಲೇ ಎಲ್ಲಿಯೋ ಕಳವಾಗಿವೆಯೆಂಬದು ಅವನ ನಿದರ್ಶನಕ್ಕೆ ಬರಲು:—ಸುಶೀ, ನೀನು ಕುಳಿತಿದ್ದ ಆ ಡಬ್ಬಿಯಲ್ಲಿ ಮತ್ತೆ ಯಾರ್‍ಯಾರು ಕುಳಿತಿದ್ದರು?

ಡಬ್ಬಿಯಲ್ಲಿ ಯಾರ್‍ಯಾರು ಇದ್ದರೆಂದು ಶಿತಿಕಂಠನು ಪ್ರಶ್ನೆ ಮಾಡಿದ ಕೂಡಲೆ ಮದ್ರೂರಲ್ಲಿ ನೆರಳುತ್ತ ಬಂದು ಬಿದ್ದುಕೊಂಡಿದ್ದ, ಆ ಹೆಂಗಸಿನ ನೆನಪು ಸ್ತ್ರೀಳಿಗೆ ಆಯಿತು. ಕೂಡಲೆ ಅವಳ ಸಂಗತಿಯನ್ನು ತಿಳಿಸಿದಳು. ಅದನ್ನು ಕೇಳಿ ಅವನು:—ಒಟ್ಟಿನಲ್ಲಿ ಅವಳು ತನ್ನ ಗಂಟೆಗಾಗಿ ನಿನ್ನನ್ನು ಹೊರಗೆ ಕಳಿಸಿ, ಡಬ್ಬಿ ಯಲ್ಲಿದ್ದ ನಿನ್ನ ಪೆಟ್ಟಿಗೆಯೊಳಗಿನ ಆ ಕಾಗದ-ಪತ್ರದ ಗಂಟನ್ನು ಎತ್ತಿಹಾಕಿರುವ ಳಲ್ಲವೆ? ಅಂತೂ, ಅದೂ ಒಂದು ಮೂರನೇ ವ್ಯಕ್ತಿಯು ಎಂಕ್ಯಾಮಾವನ ಆಸ್ತಿ ಯನ್ನೆತ್ತಿಹಾಕುವ ಉದ್ಯೋಗದಲ್ಲಿಯೇ ತೊಡಗಿರುತ್ತದೆನ್ನಬೇಕಾಯಿತು?

"ಎಲಲ!! ತೋರಿಕೆಯಲ್ಲಿ ಒಳ್ಳೇ ಸಂಭಾವಿತರಾಗಿ ತೋರುವ ಜನರೇ ಮಹಾ ಮೋಸಗಾರರಿರುತ್ತಾರಲ್ಲವೆ?" ಎಂದು ಉದ್ವೇಗದಿಂದ ಸುಶೀಲೆಯು ನುಡಿಯಲು,

ಶಿತಿಕಂಠನು ಅವಳ ಮೇಲೆ ಹಲ್ಲು ಕಡಿಯುತ್ತ:—"ಸುಶೀ, ನೀನು ಆ ಕಳ್ಳನ ಬಲೆಯಲ್ಲಿ ಸಿಕ್ಕು, ನನ್ನನ್ನು ವಂಚಿಸಿದೆಯಲ್ಲವೆ?" ಎಂದು ಅನ್ನಲು,

"ಅದನ್ನೆಲ್ಲ ದೇವರೇ ಮಾಡಿರುವನೆಂದು ನನ್ನ ವಿಶ್ವಾಸವಿದೆ. ಯಾಕಂ ದರೆ, ಯಾವ ಹೊಯ್ಮಾಲೆಯು ನೋಟಿನ ಪುಡಿಕೆಯೆಂದು ಆ ಕಾಗದ -ಪತ್ರಗಳ ನ್ನೆತ್ತಿ ಹಾಕಿರುವಳೋ, ನೋಟಾಗದ ಬಳಿಕ ಅವಳು ಮತ್ತಾವ ಬಗೆಯಿಂದಾ ದರೂ ಅವು ಯಾರವೋ ಅವರಿಗೆ ಕಳಿಸಿಕೊಟ್ಟಾಳು. ಅವನ್ನು ಅವಳು ಇಟ್ಟು ಒಯ್ಯದೆ,

ಅವು ನಿನ್ನ ಕೈಗೆ ಸಿಕ್ಕಿದ್ದರೆ ಎಷ್ಟು ಅನರ್ಥವಾಗುತ್ತಿತ್ತಲ್ಲ! ಶಿತಿಕಂಠಾ, ದೇವರ ಈ ಅಗಾಧ ಮಹಿಮೆಯನ್ನು ಕಂಡಾದರೂ ಕಣ್ತೆರೆ. ನೀನು ನಾಮಧಾರಿ ಶ್ರೀಕಂಠನೆಂದೇ ನಿನಗೆ ಆ ಕಾಗದ-ಪತ್ರಗಳು ಪುನಃ ಸಿಗಲಿಲ್ಲ. ದೇವರ ಲೀಲೆಯಿಂದ ಅವು ನಡುವೇ ಮಾಯವಾದವು. ದೇವರ ದರ್ಬಾರದಲ್ಲಿ ಸತ್ಯಾಸತ್ಯಗಳ ಪರೀಕ್ಷೆಯು ಅಯಥಾರ್ಥವಾಗಲರಿಯದು'' ಎಂದು ನುಡಿಯುತ್ತ ಸುಶೀಲೆಯು ಶಿತಿಕಂಠನ ಕಡೆಗೆ ತಿರಸ್ಕಾರ ದೃಷ್ಟಿಯಿಂದ ನೋಡಿದಳು.

"ಸುಶೀ, ದೇವರ ಬೆದರಿಕೆಯ ಬವ್ವಗಳಿಗೆ ಬೆದರಿ ನಡೆಯುವವನು ನಾನಲ್ಲ. ಆ ಕಾಗದಗಳು ಆ ಕಳ್ಳನ ಕೈಗೆ ತಲುಪುವಷ್ಟರಲ್ಲಿ ನಾನು ಏನೇನು ಮಾಡೇನೆಂಬದರ ಕಲ್ಪನೆಯಾದರೂ ನಿನಗದೆಯೋ?''

"ನೀನು ಮಾಡುವದೇನು? ಅವರ ಒಂದು ಕೂದಲನ್ನು ಕೂಡ ಕೊಂಕಿಸುವ ಸಾಮರ್ಥ್ಯವು ನಿನ್ನಲ್ಲಿಲ್ಲ. ಬರೇ ಇಂಥ ಒಣ ಬಡಬಡಿಕೆಯಿಂದ ಪ್ರಯೋಜನವೇನು?'

"ಹುಚ್ಚ ಹುಡಗೀ, ಯಾವನು ಆ ನಿನ್ನ ಪ್ರಿಯಕರನನ್ನು ತಕ್ಕಿಸಿ, ನಿನ್ನ ಪತ್ರೆಯನ್ನು ಒಮ್ಮೆಯಾದರೂ ಹಚ್ಚಿಕೊಂಡಿರುವೆನೋ, ಅದೇ ನಾನು ಆ ಕಾಗದ-ಪತ್ರಗಳು ಹೋದವೆಂದು ಖತಿಗೊಂಡು, ಅನಾಯಾಸವಾಗಿ ನನ್ನ ಬಲೆಯಲ್ಲಿ ಸಿಕ್ಕಿರುವ ಈ ಸುಶೀಲಾ ಹೆಣ್ಣನ್ನು ಭ್ರಷ್ಟಗೊಳಿಸದೆ ಬಿಡುವೆನೇ? ನೀನು ಎಷ್ಟು ಖಾತ್ರಿಪೂರ್ವಕವಾಗಿ ಹೇಳಿದರೂ, ಆ ಕಾಗದ-ಪತ್ರದ ಬಾಬಿನಲ್ಲಿ ನಿನ್ನಲ್ಲಿ ನನ್ನ ವಿಶ್ವಾಸ ಕೂಡಲೊಲ್ಲದು. ವಿಷದ ಪರೀಕ್ಷೆಯನ್ನು ಮಾಡುವಾಗ ವಿಷವನ್ನೇ ಅವಲಂಬಿಸಿರುವದು ಯಾವಾಗಲೂ ಜವಾಬುದಾರಿಯದೇ ಆಗಿರುತ್ತದೆ. ನಿನ್ನ ಆ ಪ್ರಿಯಕರ ನಾಮಧಾರಿ ಶ್ರೀಕಂಠನನ್ನು ಮತ್ತೆ ಕೃತ್ರಿಮ ಪೋಲೀಸರಿಂದ ಕರೆಕಳುಹಿಸುವೆನು; ಹಾಗು ಅವನನ್ನು ನೆಲಮನೆಯಲ್ಲಿ ಸೆರೆಯಿಡುವೆನು. ಆ ಬಳಿಕ ಅವನ ಕೈಗೆ ಆ ಕಾಗದ-ಪತ್ರಗಳ ಪುಡಿಕೆಯು ಹೇಗೆ ಬಂದು ಬೀಳುವದೋ ನೋಡುವವನಿದ್ದೇನೆ.''

"ಶಿತಿಕಂಠಾ, ನೀನು ಮೊಸಳೆಯ ಜಾತಿಯವನು. ಅಂತೇ ನಿನಗೆ ಉಪಕಾರ ಮಾಡಿದವರಿಗೆ ಹೀಗೆ ಅಪಕಾರ ಬಗೆಯುವ ಹಂಚಿಕೆ ಹಾಕುತ್ತೀ.''

"ಈ ಜಗತ್ತಿನಲ್ಲಿ ಸ್ವಾರ್ಥದ ಮುಂದೆ ಪ್ರತ್ಯಕ್ಷ ಪರಮೇಶ್ವರನೂ ಕಃ-ಪದಾರ್ಥವೆಂದೇ ತಿಳಿಯಬೇಕು. ನನಗೆ ಎಂಕ್ಯಾಮಾವನ ಎಲ್ಲ ಆಸ್ತಿಯೂ, ನೀನೂ ಬೇಕಾಗಿರುತ್ತೀರಿ. ಸರಳ ಮಾರ್ಗದಿಂದ ಇವು ನನ್ನ ಕೈಸೇರದಿದ್ದರೆ, ನಿನ್ನ ಆ ಪ್ರಿಯಕರನನ್ನು ಯಮಲೋಕಕ್ಕೆ ಕಳಿಸಿಯಾದರೂ ನಾನು ನನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳತಕ್ಕವನೆಂಬದು ಖಂಡಿತವು. ಇಷ್ಟು ನಾನು ನನ್ನ ಆ ಕೆಲಸ

ಗಳಗಾಗಿ ತೆರಳುತ್ತೇನೆ ಆ ನಿನ್ನ ಪ್ರಿಯಕರನನ್ನು ಸೆರೆಯಿಟ್ಟ ಬಳಿಕ ನಿನ್ನನ್ನೊಯ್ದು ಅವನಿಗೆ ತೋರಿಸುತ್ತೇನೆ ಹಾಗು ಆ ಒಳಗಾಗಿ ನೀನು ನನ್ನ ಇಚ್ಛೆಯಂತೆ ನಡೆಯಲಿಕ್ಕೆ ಒಪ್ಪದಿದ್ದರೆ, ಆ ನಿನ್ನ ಪ್ರಿಯಕರನ ಎದುರಿಗೇ ನಿನ್ನನ್ನು ಭ್ರಷ್ಟಗೊಳಿಸುತ್ತೇನೆ, ತಿಳಿಯಿತೇ. ಸುಶೀ, ಈ ಮಾತಿನ ಬಗ್ಗೆ ವಿಚಾರ ಮಾಡು; ನಾನು ಇನ್ನೊಮ್ಮೆ ನಿನಗೆ ಭೇಟಿಯಾಗುವವರೆಗೂ ಚೆನ್ನಾಗಿ ವಿಚಾರ ಮಾಡು. ಅಂದು ನೀನು ನನ್ನ ಇಚ್ಛೆಯಂತೆ ನಡೆಯಲು ಒಪ್ಪದಿದ್ದರೆ, ನಿನ್ನೆದುರಿಗೇ ಆ ನಿನ್ನ ಪ್ರಿಯಕರನನ್ನು ತುಂಡರಿಸಿ, ಭೀಮನು ದುಃಶಾಸನನನ್ನು ಕೊಂದು ಅವನ ರಕ್ತದ ಕೈಯಿಂದ ದ್ರೌಪದಿಯ ಹೆರಳನ್ನು ಹೇಗೆ ಹಾಕಿದನೋ, ಹಾಗೆಯೇ ನಾನು ಆ ನಾಮಧಾರಿಯ ರಕ್ತದಲ್ಲಿ ಮುಳುಗಿಸಿದ ಕೈಯಿಂದ ನಿನ್ನ ಹೆರಳನ್ನು ಹಿಡಿದು............''

``ಸಾಕು-ಸಾಕು ಮಾಡು, ಈ ನಿನ್ನ ಬಡಬಡಿಕೆಯನ್ನು! ಲೋಕದೊಳಗಿನ ಅಬಲೆಯರ ಲಜ್ಜೆ-ನಾಚಿಕೆಗಳೆಲ್ಲ ನಿನ್ನಂಥ ಪಿಶಾಚಿಯ ಕೈವಶವಾದರೆ, ಬೆಳಗು-ಮುಂಜಾವುಗಳಾಗಲಿಕ್ಕಿಲ್ಲ; ಮಳೆ-ಬೆಳೆಗಳಾಗಲಿಕ್ಕಿಲ್ಲ ಎಲ್ಲೆಡೆಯಲ್ಲಿ ಪಿಶಾಚಿಗಳ ಸಾಮ್ರಾಜ್ಯವೇ ಹಬ್ಬೀತು.''

``ಸೊಕ್ಕಿನ ಹುಡಿಗೀ, ಸುಮ್ಮನೆ ಹಟಮಾರಿತನ ಮಾಡಬೇಡ. ಚೆನ್ನಾಗಿ ಆಲೋಚಿಸು. ಓಡಿಹೋಗುವ ಹವ್ಯಾಸಪಡಬೇಡ ಹೊರಗಿರುವ ಆ ನನ್ನ ವಿಶ್ವಾಸುಕ ಆಳು ಇಂಥ ಪ್ರಸಂಗವೇ ಬಂದರೆ, ನಿನ್ನ ಗೋಣು ಮುರಿಯಲಿಕ್ಕೆ ಕೂಡ ಹಿಂಜರಿಯಲಾರನು'' ಎಂದೆಂದು ಆ ನೀಚ ಶಿತಿಕಂಠನು ಆ ಕೋಣೆಯ ಹೊರಗೆ ಬಂದು, ಕದಮುಚ್ಚಿ ಅದಕ್ಕೆ ಚಿಲಕ-ಕೀಲಿಗಳನ್ನು ಹಾಕಿದನು; ಹಾಗು ಆಮೋಘವರ್ಷನನ್ನು ಕರೆದು ಅವನ ಕಿವಿಯಲ್ಲಿ ಏನೇನೋ ಮೆಲ್ಲಗೆ ಹೇಳಿ, ಅಟ್ಟದ ಪಾವಟಿಗೆಗಳನ್ನಿಳಿದು ಕೆಳಗೆ ಬಂದನು. ದಾರಿಯಲ್ಲಿ ನಿಂತು ಅವನು ಮತ್ತೊಮ್ಮೆ ಸುಶೀಲೆಯನ್ನು ಕೂಡಹಾಕಿದ್ದ ಆ ಕೋಣೆಯ ಕಡೆಗೆ ನೋಡಿ, ಲಗುಬಗೆಯಿಂದ ನಡೆದನು. ಪಾಪ! ಆ ಸಾಧ್ವಿ ಸುಶೀಲೆಯು ಆ ಕೋಣೆಯಲ್ಲಿ ಸೆರೆಸಿಕ್ಕಳು. ಅವಳಿಗೆ ತನ್ನ ಪ್ರಾಣಗಳ ಬಗ್ಗೆ ಎಳ್ಳಷ್ಟು ವಿಷಾದವೆನಿಸುತ್ತಿದ್ದಿಲ್ಲ; ಆದರೆ ಆ ಚಾಂಡಾಲ ಶಿತಿಕಂಠನು ಶ್ರೀಕಂಠರಾಯರನ್ನು ಮತ್ತಾವ ಸಂಕಟಕ್ಕೀಡು ಮಾಡುವನೋ, ಅದರಿಂದ ಅವರಿಗೆ ಎಷ್ಟು ತೊಂದರೆಯಾಗುವದೋ ಎಂಬ ವಿಚಾರದಿಂದ ಅವಳಿಗೆ ತೀವ್ರವಾದ ಕಳಕಳಿಯೆದ್ದಿತು. ಆಗ ಆಕೆಯು ಗಟ್ಟಿ-ಗಟ್ಟಿಯಾಗಿ ಅಳಹತ್ತಿದಳು. ದೇವರನ್ನು ಕುರಿತು ಎಷ್ಟೋ ವಿಧವಾಗಿ ಪ್ರಾರ್ಥಿಸಿದಳು. ಆ ಕೋಣೆಯೊಳಗಿನ ಕಿಟಕಿಯು ತುಸ ಕೆಳಗೆ ಇದ್ದರೆ ಅದರೊಳಗೆ ಮೋರೆ ಹಾಕಿ ಚೀರಿ-ಒದರಿ ದಾರಿಯೊಳಗಿನ ಜನರಿಗೆ ತನ್ನ ಕಷ್ಟಗಳನ್ನು

ತಿಳಿಸುತ್ತಿದ್ದಳು; ಆದರೆ ಅದೂ ಸಾಧ್ಯವಿರಲಿಲ್ಲ. ಅದಿಂದ ಈ ಸೆರೆಮನೆಯೊಳಗಿಂದ ನಾನು ಹೇಗೆ ಪಾರಾಗುವದೆಂಬ ವಿಚಾರದಿಂದ ಅವಳು ಮುಂದುಗಾಣದಾದಳು. ಶ್ರೀಕಂಠರಾಯರು ಬೆಂಗಳೂರಿಗೆ ನನ್ನ ಹೆಸರಿಗೆ ತಾರು ಮಾಡಿದ್ದರೆ, ಹಾಗು ಅಲ್ಲಿ ನನ್ನ ಪತ್ತೆಯೇ ಹತ್ತಲಿಲ್ಲೆಂದು ಅವರಿಗೆ ತಿಳಿದರೆ, ನನ್ನ ಬಗ್ಗೆ ಅವರ ಗ್ರಹಿಕೆಯೇನಾಗಿರಬಹುದು? ವಿಶ್ವಾಸಘಾತುಕ, ನೀಚ ಮುಂತಾದ ವಿಶೇಷಣಗಳಿಂದ ಅವರು ನನ್ನನ್ನು ಮನಸ್ಸಿನಲ್ಲಿಯೇ ಹಳಿದಿರಬಹುದಲ್ಲವೆ? ಇತ್ಯಾದಿ ತರ್ಕ-ವಿತರ್ಕಗಳಿಂದ ಸುಶೀಲೆಯು ತಳಮಳಿಸಹತ್ತಿದಳು. ಆಗ ಅವಳು ಹೋ ಎಂದು ದೊಡ್ಡ ದನಿತೆಗೆದು ಅಳಲಾರಂಭಿಸಿದಳು. ಎಲೈ ನಿಷ್ಪಾಪ ಹುಡುಗೀ, ನೀನು ಆ ಶಿತಿಕಂಠನ ಬಲೆಯಲ್ಲಿ ಸಿಕ್ಕು, ಎಂಥ ಕಠಿಣ ವಿಪತ್ತಿಗೆ ಗುರಿಯಾದೆಯಲ್ಲ! ದೈವದ ಲೀಲೆಗಳನ್ನು ದೈವವೇ ನೀಗಿಸಬೇಕಲ್ಲದೆ, ಮಾನವರಿಂದ ಅಸಾಧ್ಯವೇ ಸರಿ.

---

## ೬ನೇ ಮೆಟ್ಟಲು--ಶಿತಿಕಂಠನ ಪೂರ್ವವೃತ್ತ.

ಆ ಘಾತುಕ ಶಿತಿಕಂಠನು ತನ್ನ ಸಂಗಡಿಗನಾದ ಅರ್ಮೋಗಮ್‌ನ ಕಿವಿಯಲ್ಲಿ ಏನೇನೋ ಹೇಳಿ ಹೊರಟು ಹೋದನು; ಹಾಗು ಅರ್ಮೋಗಮ್‌ನು ಶ್ರೀಕಂಠನನ್ನು ಶಿತಿಕಂಠನ ಬಲೆಯಲ್ಲಿ ಕೆಡವುವದಕ್ಕಾಗಿ ಅವನ ಸುತ್ತುಮುತ್ತಲು ಬಲೆಯೊಡ್ಡಲುಪಕ್ರಮಿಸಿದನು; ಆದರೆ ವಾಚಕರೇ, ಆ ಘಾತುಕ ಶಿತಿಕಂಠನ್ಯಾರು ಎಂಕ್ಯಾಮಾವನ ಪೂರ್ವ ಪರಿಚಯವೇನು? ಮುಂತಾದವುಗಳನ್ನು ತಿಳಿಯದೆ ಈ ಕಥಾನಕವನ್ನು ಹೇಳಿ-ಕೇಳಿದರೆ ಏನೂ ಪ್ರಯೋಜನವಾಗದು. ಆದ್ದರಿಂದ ನಾವು ಈಗ ಆ ಎಂಕ್ಯಾಮಾವ, ಶಿತಿಕಂಠ ಮುಂತಾದವರ ಅಲ್ಪ ಪರಿಚಯವನ್ನು ನಿಮಗೆ ಮಾಡಿಕೊಡುತ್ತೇವೆ:—

ಎಂಕ್ಯಾಮಾವ ಹಾಗು ಅವನ ತಮ್ಮ (ಅವನ ಹೆಸರೇನೋ ನೆನಪಾಗಲೊಲ್ಲದು.) ಇಬ್ಬರೂ ಸಹೋದರರು; ಅವರ ಮೂಲನಿವಾಸವು ಮೈಸೂರ ಸಂಸ್ಥಾನದೊಳಗಿನ ಮೇಲುಕೋಟೆಯಾಗಿತ್ತು. ಎಂಕ್ಯಾಮಾವನೇ ಹಿರಿಯನಾದ್ದರಿಂದ ಮನೆತನದ ಎಲ್ಲ ಹಿರಿಯತನವು ಸಹಜವಾಗಿ ಇವನ ಪಾಲಿಗೇ ಬಂದಿತ್ತು. ಇವನ ತಮ್ಮನು ಮಾತೃಭಾಷೆಯ ಮಟ್ಟಿಗೆ ಅಭ್ಯಾಸ ಮಾಡಿದ್ದನೇ ಹೊರತು ಇಂಗ್ಲಿಷ ಕಲಿತು, ಕಚೇರಿ-ದರ್ಬಾರುಗಳಲ್ಲಿ ಅಡ್ಡಾಡಿದವನಲ್ಲ. ಅದರಿಂದ ಅವನು ಹೊಲ-ಮನೆ ಮಾಡಿಸಿಕೊಂಡಿರುತ್ತಿದ್ದನು. ಎಂಕ್ಯಾಮಾವನು ಉಚ್ಚಶಿಕ್ಷಣ ಪಡೆದವನು; ಮೇಲಾಗಿ ಮೈಸೂರ ಸಂಸ್ಥಾನದಲ್ಲಿ ಅವನು ದೊಡ್ಡ ಹುದ್ದೆಯ ಅಮಲದಾರನಾಗಿದ್ದನು. ಅದರಿಂದ ಅವನ ಪ್ರಸ್ಥವು ಕಚೇರಿ-ದರ್ಬಾರುಗಳಲ್ಲಿ ಬೆಳೆ

ದಂತೆ ಮನೆತನದಲ್ಲಿಯೂ ಹೆಚ್ಚಿತು. ಅವನು ತನ್ನ ತಮ್ಮನ ಪಾಲಿಗೆ ಬರೇ ಮನೆ, ಕರೇ ಹೊಲಗಳನ್ನಿಟ್ಟು, ಮನೆಯೊಳಗಿನ ಪಿತ್ರಾರ್ಜಿತ ಆಸ್ತಿಯನ್ನೆಲ್ಲ ಎತ್ತಿ ಹಾಕಿದ್ದನು. ತಂದೆ-ತಾಯಿಗಳಿರುವಾಗಲೇ ಆ ಉಭಯ ಬಂಧುಗಳ ಲಗ್ನಕಾರ್ಯಗಳಾಗಿದ್ದವು; ಆದರೆ ಇಬ್ಬರ ಹೆಂಡಂದಿರಲ್ಲಿಯೂ ಸಖ್ಯವಿರಲಿಲ್ಲ. ಇಬ್ಬರೂ ಒಬ್ಬರನ್ನೊಬ್ಬರು ದ್ವೇಷಿಸುತ್ತಿದ್ದರು; ಆದರೂ ಅತ್ತೆ-ಮಾವಂದಿರ ತರುವಾಯ ಮನೆಯ ಹಿರಿಯತನವು ಎಂಕ್ಯಾಮಾವನ ಮಡದಿಗೇ ಹಕ್ಕಿನಿಂದ ಪ್ರಾಪ್ತವಾಗಿತ್ತಲ್ಲದೆ, ಅವಳ ತವರು ಮನೆಯವರು ಶ್ರೀಮಂತ ಜಹಗೀರದಾರರು. ತಮ್ಮನ ಹೆಂಡತಿಯು ಬಡವರ ಮಗಳು. ಆದ್ದರಿಂದ ಅವಳನ್ನು ಕೇಳುವವರಾರು? ಬರಹೋಗುವವರೆಲ್ಲ ಎಂಕ್ಯಾಮಾವನ ಹೆಂಡತಿಯ ಪಕ್ಷಹಿಡಿದೇ ಮಾತಾಡತಕ್ಕವರು. ಇದರಿಂದ ಮನೆಯಲ್ಲಿ ಸದಾ ಸರ್ವದಾ ಸಣ್ಣ-ಪುಟ್ಟ ಜಗಳ ತಂಟೆಗಳು ನಡದೇ ಇರುತ್ತಿದ್ದವು; ಆದರೆ ಎಂಕ್ಯಾಮಾವನ ತಮ್ಮನೆಂದರೆ ಪ್ರತಿಸಾಂಬನ ಅವತಾರವೇ. ಹಿರಿಯಣ್ಣನೆಂದರೆ ಅವನಿಗೆ ಪ್ರತ್ಯಕ್ಷ ದೇವರೇ. ಅವನು ಮಾಡಿದ್ದೇ ಇವನಿಗೆ ಮಟ್ಟು. ಆ ಕೃತಿಯು ಇವನ ಲಾಭದ್ದಿರಲಿ, ಇಲ್ಲವೆ ಹಾನಿಯದಿರಲಿ, ಅದರ ವಿಚಾರವನ್ನು ಇವನು ಮಾಡತಕ್ಕವನೇ ಅಲ್ಲ. ಇವನ ಹೆಂಡತಿಯು ಎಂಕ್ಯಾಮಾವನ ಹಾಗು ಅವನ ಹೆಂಡತಿಯ ದೂರುಗಳನ್ನು ಸಮಯ ಸಿಕ್ಕಾಗೆಲ್ಲ ಇವನ ಮುಂದೆ ತೋಡಿಕೊಳ್ಳುವಳು; ಆದರೆ ಹೇಳುವವರೆಗೆ ಕೇಳಿಕೊಂಡು, ನಂತರ ಶ್ವಾನವು ಚಟಪಟ ಕಿವಿ ಝಾಡಿಸಿಕೊಂಡು ಹೊರಟು ಹೋಗುವಂತೆ ಇವನ ನಿತ್ಯದ ಪರಿಪಾಠವಾಗಿತ್ತು.

ಎಂಕ್ಯಾಮಾವನ ತಮ್ಮನಿಗೆ ಶ್ರೀಕಂಠನೆಂಬ ಹೆಸರಿನ ಒಬ್ಬ ಮಗನಿದ್ದನು. ಅವನು ಉಚ್ಚಶಿಕ್ಷಣಕ್ಕಾಗಿ ಅವನನ್ನು ಬೆಂಗಳೂರೊಳಗಿನ ಯಾವದೋ ಒಂದು ಹಾಯಸ್ಕೂಲಿನಲ್ಲಿ ಇಟ್ಟಿದ್ದರು. ಎಂಕ್ಯಾಮಾವನಿಗೆ ಆಗ ಮೇಲುಕೋಟೆಯಲ್ಲೇ ಕೆಲಸವಿದ್ದಿತು. ಅದರಿಂದ ಮನೆಯಲ್ಲಿ ಎಂಕ್ಯಾಮಾವನ ಹಾಗು ಅವನ ಹೆಂಡತಿ ಅವರಿಬ್ಬರು ದೊರೆ-ದೊರೆಸಾನಿಗಳು; ಅವನ ತಮ್ಮನ ಹಾಗು ತಮ್ಮನ ಹೆಂಡತಿ ಇವರೀರ್ವರೂ ಅವರ ಅಡಿಗೆ-ನೀರಿನವರು. ಮನೆಯೊಳಗಿನ ಎಲ್ಲ ಹಿರಿಯತನವು ಅವರದೇ; ಆದರೆ ಮನುಷ್ಯನು ಎಂಥ ಸಭ್ಯನಾದರೂ, ಎಂಥ ತಿಳುವಳಿಕೆಯವನಾದರೂ ಅವನಿಗೆ ದಿನಾಲು ತೊಂದರೆ ಕೊಡಹತ್ತಿದರೆ ಅವನು ಒಮ್ಮೆಲ್ಲೊಮ್ಮೆ ರೇಗಿಗೇಳತಕ್ಕವನೇ. ಎಂಕ್ಯಾಮಾವನ ತಮ್ಮನು ಸಿಟ್ಟಿಗೇಳಲಿಕ್ಕೆ ಒಮ್ಮೆ ಇಂಥದೇ ಒಂದು ಕಾರಣವುಂಟಾಯಿತು. ಅದರಿಂದ ಆ ಇಬ್ಬರು ಅಣ್ಣ-ತಮ್ಮಂದಿರಲ್ಲಿ ಘನಘೋರ ಸಂಗ್ರಾಮವೆಸಗಿತು. ಅಂದೇ ಎಂಕ್ಯಾಮಾವನ ತಮ್ಮನು ತನ್ನ ಹೆಂಡತಿಯನ್ನು ಕಟ್ಟಿಕೊಂಡು ಬೇರೆ ಇರಬೇಕಾಯಿತು.

ಆ ಸಿಟ್ಟಿನ ಭರದಲ್ಲಿ ಆ ತಮ್ಮನು ತಮ್ಮ ಪಿತ್ರಾರ್ಜಿತ ಆಸ್ತಿಯ ಅರ್ಧಭಾಗವನ್ನು ಬೇಡಿದನು; ಆದರೆ ಎಂಕ್ಯಾಮಾವನು ಮಹಾಕಾರಸ್ಥಾನಿಯು. ಅಂತಿಂಥ ಪ್ಯಾದೆಗಳಿಗೆ ಅವನು ಹಣಿಯತಕ್ಕವನೇ? ಅವನು ಪಿತ್ರಾರ್ಜಿತ ಜಂಗಮ ಆಸ್ತಿಯನ್ನೆಲ್ಲ ಈ ಮೊದಲೇ ಎತ್ತಿಹಾಕಿ, ತನ್ನ ಹೆಸರಿಗೆ ಬ್ಯಾಂಕುಗಳಲ್ಲಿಟ್ಟಿದ್ದನು. ಸ್ಥಾವರ ಹೊಲ-ಮನೆ-ಆಸ್ತಿಯನ್ನು ಈ ಮೊದಲೇ ಒಂದು ಖೊಟ್ಟಿ ಖಂಡಪತ್ರ ಹುಟ್ಟಿಸಿ, ಭಾಗಮಾಡಿದ್ದನು; ಹಾಗು ಆ ಖಂಡಪತ್ರ ತಯಾರಾದ ಕೆಲದಿನಗಳ ತರುವಾಯ ತಮ್ಮನ ಭಾಗದ ಎಲ್ಲ ಆಸ್ತಿಯನ್ನು ಮೂರನೆಯವನ ಹೆಸರಿಗೆ ಖರೀದಿ ಬರೆಸಿ, ತದನಂತರ ೧-೨ ತಿಂಗಳುಗಳಿಗೆ ಆ ಮೂರನೆಯವನಿಂದ ತನ್ನ ಹೆಸರಿಗೆ ಖರೀದಿ ಬರೆಸಿಟ್ಟುಕೊಂಡಿದ್ದನು. ಹೀಗಾಗಿ ಆ ತಮ್ಮನ ಆಸ್ತಿಯನ್ನೆಲ್ಲ ಎತ್ತಿಹಾಕಿ, ಅವನಿಗೆ ಚಿಂತಾಮಣಿ ಪಾತ್ರೆಯನ್ನೇ ತೋರಿಸಿದ್ದನು. ಆ ತಮ್ಮನು ಭೋಳೇ ಸ್ವಭಾವದವನಿದ್ದದರಿಂದಲೂ, ಅಣ್ಣನಲ್ಲಿ ಹೆಚ್ಚಾಗಿ ವಿಶ್ವಾಸವಿಟ್ಟದ್ದರಿಂದಲೂ, ಅಣ್ಣನೇ ಆ ಪ್ರಾಂತದ ಶ್ರೇಷ್ಠ ಅಮಲದಾರನಿದ್ದದರಿಂದಲೂ, ಅವನಿಗೆ ಎಂಕ್ಯಾಮಾವನ ಈ ಹುಚ್ಚು-ಹುಳುಕುಗಳಾವವೂ ತಾನಾಗಿ ಭಾಗಬೇಡುವವರೆಗೆ ತಿಳಿಯಲಿಲ್ಲ. ಆಗ ಭಾಗದ ಬಗ್ಗೆ ಕೋರ್ಟು-ಕಚೇರಿಗಳನ್ನು ಹತ್ತಬೇಕೆಂದರೆ ಕೈಯಲ್ಲಿ ಕಾಸಿಲ್ಲ; ಮೇಲಾಗಿ ಎಲ್ಲ ಕಡೆಗೂ ಎಂಕ್ಯಾಮಾವನಂತಹ ದೊಡ್ಡ ಅಮಲ್ದಾರನ ಭಿಡೆ-ಮುರವತ್ತುಗಳು. ಈ ಮೂಲಕ ಇವನನ್ಯಾರೂ ಹಚ್ಚಿಕೊಳ್ಳಲಿಲ್ಲ.

ಇಷ್ಟರಲ್ಲಿ ಆ ತಮ್ಮನ ದುರ್ದೈವವು ಒತ್ತರಿಸಿದ್ದರಿಂದ ಅವನ ಹೆಂಡತಿಯು ಗಂಟು ಬೇನೆಯಿಂದ ಸತ್ತಳು. ಅದೇ ಕಾಲಕ್ಕೆ ಎಂಕ್ಯಾಮಾವನು ತನ್ನ ಹೆಂಡತಿಯೊಡನೆ ಮೈಸೂರಿಗೆ ಹೋದನು. ಹೆಂಡತಿ ಸತ್ತಾಗಿನಿಂದ ಆ ತಮ್ಮನು ಕೇವಲ ವಿರಕ್ತನಾದನು. ಅವನು ತನ್ನ ಅಣ್ಣನ ಮೇಲೆ ದಾವೆ ಮಾಡುವ ಹವ್ಯಾಸವನ್ನು ತೊರೆದನು. ತಮ್ಮ ಶ್ರೀಕಂಠನು ಕಲಿತು ಎಲ್ಲಯಾದರೂ ಕೆಲಸ ಮಾಡಹತ್ತಿದನೆಂದರೆ, ಅವನ ಬಳಿಯಲ್ಲಿದ್ದು "ಹರಿ ಹರಿ" ಎನ್ನುತ್ತ ತನ್ನ ಶೇಷಾಯುಷ್ಯವನ್ನು ಕಳೆಯುವದನ್ನು ನಿಶ್ಚಯಿಸಿಕೊಂಡನು.

ಶ್ರೀಕಂಠನು ತನ್ನ ತಾಯಿಯ ಕ್ರಿಯಾಕರ್ಮಗಳಿಗಾಗಿ ಮೇಲುಕೋಟೆಗೆ ಬಂದಿದ್ದನು. ಅವನೆದುರಿಗೆ ಎಂಕ್ಯಾಮಾವನ ಆ ತಮ್ಮನು ತನ್ನ ಅಣ್ಣನ ನೀಚತನದ ಪರಿಚಿ ಒಪಿದನು. ಅದರಿಂದ ಶ್ರೀಕಂಠನ ಸ್ವಾಭಿಮಾನವು ಜಾಗ್ರತವಾಯಿತು. "ಈ ಸಲ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ ಎಲ್ಲಿಯಾದರೂ ನೌಕರಿ ಕೈಕೊಳ್ಳುವೆನು ಹಾಗು ಆ ಬಳಿಕ ನಿಮ್ಮನ್ನು ನನ್ನ ಬಳಿಗೆ ಕರೆದೊಯ್ಯುವೆನು." ಎಂದು ತಂದೆಗೆ ಅಭಿವಚನ ಕೊಟ್ಟು,

ಶ್ರೀಕಂಠನು ಮೈಸೂರಿಗೆ ಹೋಗಿ ತನ್ನ ದೊಡ್ಡಪ್ಪನಿಗೆ ಭೇಟಿಯಾಗಲು ಹೊರಟನು; ಆದರೆ ಕರ್ಮಧರ್ಮ ಸಂಯೋಗದಿಂದ ಆಗ ಅವರಿಬ್ಬರ ಭೆಟ್ಟಿಯಾಗಲಿಲ್ಲ ಮತ್ತು ಎಂದಾದರೂ ಹೋಗಿ ತಮ್ಮ ದೊಡ್ಡಪ್ಪನನ್ನು ತಮ್ಮ ಭಾಗದ ಬಗ್ಗೆ ಚೆನ್ನಾಗಿ ಕೈ ಹಚ್ಚಬೇಕೆಂದು ಮನಸ್ಸಿನಲ್ಲಿಯೇ ಅಂದುಕೊಂಡು, ಅವನು ತನ್ನ ಮುಂದಿನ ಉದ್ಯೋಗಕ್ಕೆ ಹತ್ತಿದನು.

ಎಂಕ್ಯಾಮಾವನ ಹೆಂಡತಿ ಹಾಗು ಅವನ ತಮ್ಮನ ಹೆಂಡತಿ ಇವರಲ್ಲಿ ವೈಮನಸ್ಸಿದ್ದರೂ, ಶ್ರೀಕಂಠನನ್ನು ಅವರ ದೊಡ್ಡವ್ವನು ಪ್ರೀತಿಸುತ್ತಿದ್ದಳು. ತನಗೆ ಇನ್ನು ಮಕ್ಕಳಾಗುವ ಆಶೆಯಿರದ್ದರಿಂದಲೂ, ತನ್ನ ತವರುಮನೆಯವರೆಲ್ಲ ಹೇಳ ಹೆಸರಿಲ್ಲದಂತಾದ್ದರಿಂದಲೂ ಆಕೆಯು ಮನಸ್ಸು ಇತ್ತೀಚೆಗೆ ತುಸ ಪಾಪಭೀರುವಾಗಲಾರಂಭಿಸಿತ್ತು. ಈ ಅವಸ್ಥೆಯಲ್ಲಿ ಅವಳು ಬೇನೆಯಿಂದ ಕೊಳೆಯುಹತ್ತಿದ ಬಳಿಕಂತೂ ಕೇಳುವದೇನು? ಶ್ರೀಕಂಠನ ತಾಯಿ ಸತ್ತ ಬಳಿಕ ಅವಳು ಮನಸ್ಸಿನಲ್ಲಿ ಬಹಳ ಉದಾಸೀನಗೊಂಡಳು. ಇದು ವರೆಗೆ ತನ್ನ ನೆಗೆಣ್ಣಿಯೊಡನೆ ಒಂದು ದಿನವೂ ಸುಖ-ಸಮಾಧಾನದಿಂದಿರಲಿಲ್ಲವೆಂದು ಅವಳಿಗೆ ಪಶ್ಚಾತ್ತಾಪವಾಯಿತು. "ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲ." ಇನ್ನು ನಾವು ಆ ಶ್ರೀಕಂಠನನ್ನು ದತ್ತು ಅಂತಃ ಮಾಡಿಕೊಂಡರೆ ಈ ವರೆಗೆ ನಾವು ಆ ಶ್ರೀಕಂಠನ ತಾಯಿಯನ್ನು ಗೋಳಾಡಿಸಿದ ಪಾಪದ ಅಲ್ಪಾಂಶವಾದರೂ ನಿವಾರಣವಾದೀತೆಂದು ಆಕೆಯು ಮನಸ್ಸು ಆಕೆಗೆ ಕಟಿಯುಹತ್ತಿತು. ಅಂತೇ ಅವಳು ಈ ಕಥಾನಕದ ಇನೇ ಮೆಟ್ಟಲಿನಲ್ಲಿ ವರ್ಣಿಸಿದಂತೆ, ಇತ್ತೀಚೆಗೆ ತನ್ನ ಗಂಡನ ಹಿಂದೆ ಕೈತೊಳೆಕೊಂಡು ಬೆನ್ನು ಹತ್ತಿ, ಶ್ರೀಕಂಠನನ್ನು ದತ್ತಕ ತೆಗೆದುಕೊಳ್ಳುವ ಸಲುವಾಗಿ ಒತ್ತಾಯಪಡಹತ್ತಿದ್ದಳು; ಆದರೆ ಎಂಕ್ಯಾಮಾವನಂತಹ ದುಷ್ಟಮನುಷ್ಯನು ಅವನೇ ಹೊರತು ಅನ್ಯರಿಲ್ಲ. ತನ್ನ ಆಸ್ತಿಯು ಒಂದು ಕಾಸು ಕೂಡ ತನ್ನ ತಮ್ಮನ ಮಗನಿಗೆ ಮುಟ್ಟಲಾಗದೆಂದು ಅವನ ಇಚ್ಛೆಯಾಗಿದ್ದಿತು. ಇರಲಿ.

ಶ್ರೀಕಂಠನು ಬೆಂಗಳೂರಲ್ಲಿ ಕಲಿಯುತ್ತಿದ್ದಾಗ ಶಿತಿಕಂಠನೆಂಬುವವನು ಅವನಿಗೆ ಸ್ನೇಹಿತನಾದನು. ಅವರೀರ್ವರೂ ಒಂದೇ ಕ್ಲಾಸಿನಲ್ಲಿ ಓದುತ್ತಿದ್ದರು; ಆದರೆ ಅವರಿಬ್ಬರ ಸ್ವಭಾವದಲ್ಲಿ, ಆಚರಣೆಯಲ್ಲಿ ಆಕಾಶ-ಪಾತಾಳಗಳಷ್ಟು ಭೇದವಿತ್ತು. ಶ್ರೀಕಂಠನು ಎಷ್ಟು ಪ್ರೇಮಲನೂ, ಸುಶೀಲನೂ, ಅಭ್ಯಾಸಮಾಡುವವನೂ ಆಗಿದ್ದನೋ, ಅಷ್ಟೇ ಅಥವಾ ಅದಕ್ಕೂ ಚವಲಿ ತೂಕ ಹೆಚ್ಚು ಶಿತಿಕಂಠನು ಉಪದ್ವ್ಯಾಪಿ, ತಾಮಸಿ ಹಾಗು ಅನಾಚರಣೆಯವನಾಗಿದ್ದನು; ಆದರೆ ಕೆಲ ಯೋಗಾಯೋಗದ ಮೂಲಕ ಶ್ರೀಕಂಠನು ಶಿತಿಕಂಠನನ್ನು ಬೆನ್ನಿಲಬಿದ್ದ ತಮ್ಮನಂತೆ ತಿಳಿಯಹತ್ತಿದನು; ಮತ್ತು ತಾನು ಉಣ್ಣುವಾಗ, ತಿನ್ನುವಾಗ

ಅವನನ್ನು ಬಿಟ್ಟಿರುತ್ತಿರಲಿಲ್ಲ. ಶಿತಿಕಂಠನು ಉಡಾಳನಾದುದರಿಂದ, ಎಲ್ಲ ವೇಳೆಯನ್ನು ತರುಣಹುಡುಗಿಯರ ಚೇಷ್ಟೆ ಮಾಡುವದು, ಗುಡಿ-ಗುಂಡಾರಗಳಲ್ಲಿ ಅಲೆಯುವದು, ಸೂಳೇರ ಕೇರಿಯೊಳಗೆ ಹುಬ್ಬು ಹಾರಿಸುತ್ತ ತಿರುಗಾಡುವದು ಇತ್ಯಾದಿ ಕೆಲಸಗಳಲ್ಲಿ ಕಳೆಯುತ್ತಿದ್ದನು. ಇತ್ತೀಚೆಗೆ ಅವನು ಸಣ್ಣ-ಪುಟ್ಟ ಕಳವುಗಳನ್ನು ಕೂಡ ಮಾಡಲಾರಂಭಿಸಿದ್ದನು. ಶಿತಿಕಂಠನು ಹೀಗೆ ಸಕಲಗುಣ ಸಂಪನ್ನ ಅವಗುಣಗಳಿಂದ ಪರಿಪೂರ್ಣನಾಗಿದ್ದರೂ, ಶ್ರೀಕಂಠನಿಗೆ ಅದರ ಗಂಧ ವಾರ್ತೆಯೂ ಇರಲಿಲ್ಲ. ತನ್ನಂತೆಯೇ ಅವನು ಸದ್ವ್ಯಾಸಂಗಿಯಿರುವನೆಂದು ಅವನ ತಿಳುವಳಿಕೆಯಾಗಿತ್ತು.

ಶ್ರೀಕಂಠನ ಪರೀಕ್ಷೆಯು ಸಮೀಪಿಸಿತ್ತು. ಅದರಿಂದ ಅವನು ಹಗಲಿರುಳು ಅಭ್ಯಾಸದಲ್ಲಿಯೇ ರತನಾಗಿದ್ದನು; ಆದರೆ ಅದೇ ಕಾಲಕ್ಕೆ ಶಿತಿಕಂಠನು ಬೇರೆ ಪ್ರಕಾರದ ತಾಲೀಮಿನಲ್ಲಿ ಗರ್ಕನಾಗಿದ್ದನು. ಪರೀಕ್ಷೆಯ ದಿವಸ ಶ್ರೀಕಂಠನೊಡನೆ ಶಿತಿಕಂಠನೂ ಪರೀಕ್ಷೆಗೆ ನಿಂತನು; ಅಭ್ಯಾಸ ಮಾಡುವದು ಹೇಗೆಂಬದು ಅವನಿಗೆ ಗೊತ್ತೇ ಇರದಾಗ, ಅವನು ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಬಗೆ ಹೇಗೆ? ಶ್ರೀಕಂಠನು ಆ ವರುಷದ ಮ್ಯಾಟ್ರಿಕ್ಕಿನಲ್ಲಿ ಫರ್ಸ್ಟ್‌ಕ್ಲಾಸಿನಲ್ಲಿ ಮೊದಲನೇ ನಂಬರ ಪಾಸಾದನು. ತಾನು ನಾಪಾಸಾದೆನೆಂದು ಶಿತಿಕಂಠನು ಕಂಡ ಕಂಡವರೆದುರಿಗೆ ತಾನಾಗಿಯೇ ಹೇಳಿ ಖೊಳ್ಳೆಂದು ನಗುತ್ತಿದ್ದನು. ಶ್ರೀಕಂಠನ ಸುದೈವದಿಂದ ಒಬ್ಬ ಗೃಹಸ್ಥನ ನೆರವಿನ ಮೂಲಕ, ಅವನಿಗೆ ಅದೇ ವರ್ಷ ೫೦ ರೂ. ತಲಬಿನ ನೌಕರಿ ಸಿಕ್ಕಿತು. ಆ ಕೂಡಲೆ ತಂದೆಗೆ ತೀವ್ರ ಬರಬೇಕೆಂದು ಅವನು ಪತ್ರ ಬರೆದನು. ತುಸ ದಿನಗಳ ನಂತರ ಬರುವೆನೆಂದು ತಂದೆಯ ಉತ್ತರವೂ ಬಂತು. ತನ್ನ ತಂದೆಯು ಬಾರದ್ದರಿಂದ ಶ್ರೀಕಂಠನಿಗೆ ಕೆಡಕೆನಿಸಿತು; ಆದರೂ ಅವನು ತಂದೆಗಾಗಿ ಪ್ರತಿತಿಂಗಳ ೧ನೇ ತಾರೀಖಿಗೆ ೨೦ ರೂ. ಗಳ ಮ. ಆ. ನ್ನು ತಪ್ಪದೆ ರವಾನಿಸುತ್ತಿದ್ದನು. ಅವನು ಖಾಸಗಿ ಕಲಿಸುವ ಕೆಲಸಗಳನ್ನು ಹಿಡಿದು ತಿಂಗಳಿಗೆ ೧೦-೨೦ ರೂ. ಬೇರೆ ತೆಗೆಯುತ್ತಿದ್ದನು. ಶ್ರೀಕಂಠನಿಗೆ ಯಾವ ದುರ್ವ್ಯಸನವೂ ಇರಲಿಲ್ಲ. ತನ್ನ ತಂದೆಯನ್ನು ಹೇಗೆ ಸಂತೋಷಗೊಳಿಸಬೇಕೆಂಬದೊಂದೇ ವಿಚಾರವು ಅವನಲ್ಲಿ ಸದಾ ತಲೆದೋರುತ್ತಿತ್ತು. ಶ್ರೀಕಂಠನು ಮಿತವ್ಯಯದಿಂದಿರುತ್ತಿದ್ದರೂ, ಶಿತಿಕಂಠನು ಅವನಿಂದ ಪ್ರತಿ ತಿಂಗಳಲ್ಲಿ ೧೦-೮ ರೂಪಾಯಿಗಳನ್ನು ಏನಾದರೂ ನೆವ ಹೇಳಿ ಎತ್ತಿಹಾಕುತ್ತಲೇ ಇದ್ದನು. ಹೀಗೆ ಸರಾಸರಿ ಒಂದು ವರ್ಷವು ಕಳೆಯಿತು.

ಇಷ್ಟರಲ್ಲಿ ಸಿಲೋನ ಸರಕಾರದವರು ಕೆಲ ಹಿಂದೀ ಚಾಣಾಕ್ಷ ತರುಣರನ್ನು ತಮ್ಮಲ್ಲಿ ನೌಕರಿಗಿಟ್ಟುಕೊಳ್ಳುವದನ್ನು ಗೊತ್ತು ಮಾಡಿ, ಹಿಂದುಸ್ತಾನದ

ಪ್ರತಿಯೊಂದು ಕಚೇರಿಗಳೊಳಗಿನ ಬುದ್ಧಿವಂತ ತರುಣರ ಪಟ್ಟಿಯನ್ನು ಕೇಳಿದರು. ಆಗ ಬೆಂಗಳೂರ ಕಚೇರಿಯೊಳಗಿನ ಕೆಲ ಜನರೂ ಆರಿಸಲ್ಪಟ್ಟರು. ಅವರಲ್ಲಿ ಶ್ರೀಕಂಠನ ಹೆಸರೂ ಬಂತು. ಅಲ್ಲಿ ಅವನಿಗೆ ತಿಂಗಳಿಗೆ ೧೫೦ ರೂ ಪಗಾರ ಹಾಗು ೫೦ ರೂ ಭತ್ತೆ ಸಿಗತಕ್ಕವಿದ್ದವು. ಕೆಲ ದಿನಗಳವರೆಗೆ ತಾನು ದೇಶಾಂತರ ಮಾಡಿ ಸಧನನಾದರೆ, ತನ್ನ ತಂದೆಯ ಸಂತೋಷವು ಉಕ್ಕೇರುವದೆಂದು ಬಗೆದು, ಅವನು ಆ ವಿಚಾರವನ್ನು ತಂದೆಗೆ ತಿಳಿಸಿ, ಅವನ ಸಮ್ಮತಿ ಪಡೆಯಲಿಕ್ಕೆ ಮೇಲುಕೋಟೆಗೆ ಹೋದನು ತಂದೆಯು ಇವನ ಆಲೋಚನೆಗೆ ಒಮ್ಮೆಲೆ ಸಮ್ಮತಿಸುವ ಬಗೆಯೆಂತು? ಮನೆಯಲ್ಲಿ ಹೆಂಡತಿಯಿಲ್ಲ; ಬೇರೆ ಮಕ್ಕಳು-ಮರಿಗಳಿಲ್ಲ; ಇದ್ದ ಒಬ್ಬ ಮಗನನ್ನು ದುಡ್ಡಿನ ಪಾಡಿಗಾಗಿ ಆದಾವ ವಾತ್ಸಲ್ಯಪೂರ್ಣ ತಂದೆಯು ವಿದೇಶಕ್ಕೆ ಹೋಗಗೊಟ್ಟಾನು? ಶ್ರೀಕಂಠನು ನಾನಾ ಬಗೆಯಿಂದ ತಂದೆಗೆ ತಿಳುವಳಿಕೆ ಹೇಳಿ, ೧ ೨ ವರ್ಷಗಳ ಮಟ್ಟಿಗೆಂದು ಅವನಿಂದ ಶಿಲೋನಕ್ಕೆ ಹೋಗುವ ಅಪ್ಪಣೆಪಡೆದನು.

ಮೇಲುಕೋಟೆಯಿಂದ ಮರಳಿ ಬಂದವನೇ ಶ್ರೀಕಂಠನು ಸಿಲೋನಕ್ಕೆ ಹೊರಡುವ ಸಿದ್ಧತೆಗೊಳಗಾದನು. ಈ ಸಂಗತಿಯು ತಿಳಿದ ಕೂಡಲೆ ಶಿತಿಕಂಠನಿಗೆ ಪರಮ ದುಃಖವಾಯಿತು. ಯಾಕೆಂದರೆ, ಶ್ರೀಕಂಠನು ಹೊರಟುಹೋದ ಬಳಿಕ ತನ್ನ ಖರ್ಚಿಗೆ ಪ್ರತಿ ತಿಂಗಳಿಗೆ ೧೦.೮ ರೂಪಾಯಿಗಳನ್ನು ಕೊಡುವವರಾರೆಂಬ ಬಗ್ಗೆ ಅವನಿಗೆ ಶೋಕವುಂಟಾಯಿತು; ಆದರೆ ತಾನು ವಿದೇಶಕ್ಕೆ ತೆರಳುತ್ತಿರುವದರಿಂದ ತನ್ನ ಜೀವದ ಗೆಳೆಯನಿಗೆ ದುಃಖವಾಗುತ್ತದೆಂದು ಶ್ರೀಕಂಠನು ತಿಳಿದನು. ಅದರಿಂದ ಅವನು ಶಿತಿಕಂಠನಿಗೆ ನಾನಾಪ್ರಕಾರದಿಂದ ತಿಳಿಹೇಳಿ, ಪ್ರಸಂಗ ನೋಡಿ ನಿನ್ನನ್ನೂ ಅಲ್ಲಿಗೆ ಕರೆದೊಯ್ಯುವ ಏರ್ಪಾಟು ಮಾಡುವೆನೆಂದು ಹೇಳಿದನು.

ಗೊತ್ತಾದ ದಿನ ಶ್ರೀಕಂಠನು ತನ್ನ ಸಾಮಾನುಗಳೊಡನೆ ಸಿಲೋನಕ್ಕೆ ಹೋಗುವದಕ್ಕಾಗಿ ಮದ್ರಾಸ ಮೇಲನ್ನು ಹತ್ತಿದನು. ಆಗ ಅವನಿಗೂ ಸ್ವದೇಶ-ಸ್ವಜನರನ್ನು ಬಿಟ್ಟುಹೋಗುವ ದುಃಖವಾಯಿತು. ಹೊರಡುವಾಗ ಶ್ರೀಕಂಠನಿಗೆ ತನ್ನ ಪ್ರವಾಸದ ಪೂರ್ವ ಸಿದ್ಧತೆಗಾಗಿ ಸಿಲೋನ ಸರಕಾರದಿಂದ ಒಂದು ತಿಂಗಳ ಸಂಬಳವು ಮುಂಗಡವಾಗಿ ದೊರೆತಿತ್ತು. ಅವುಗಳಲ್ಲಿ ೫೦ ರೂಪಾಯಿಗಳನ್ನು ಅವನು ಶಿತಿಕಂಠನ ಕೈಗಿತ್ತು:—ಈಗ ಈ ಅಲ್ಪ ಧನವನ್ನು ತಕ್ಕೊ; ನಾನು ಅಲ್ಲಿಗೆ ತಲುಪಿ, ಎಲ್ಲವೂ ಯಥಾಪ್ರಕಾರವಾಗಿ ಜರುಗಹತ್ತಿದನಂತರ ತಿಂಗ ತಿಂಗಳಿಗೆ ನಿನಗೂ ಕೈಲಾದಮಟ್ಟಿಗೆ ಸಹಾಯ ಮಾಡುವೆನೆಂದು ಹೇಳಿದನು.

ಶಿತಿಕಂಠನು ತಮಿಳು ದೇಶದವನು. ಅವನ ತಂದೆ-ತಾಯಿಗಳು, ಅವನು

ಚಿಕ್ಕವನಿರುವಾಗಲೇ ತೀರಿಕೊಂಡಿದ್ದರು. ಅವನ ಒಬ್ಬ ಅಪ್ಪನು ಅವನನ್ನು ಸಾಕಿ ಸಲುಹಿದ್ದನು. ದೊಡ್ಡವನಾದ ಬಳಿಕ ಅವನನ್ನು ಸಾಲೆಗೂ ಹಾಕಿದನು; ಆದರೆ ಶಿತಿಕಂಠನು ಹುಟ್ಟಾ ಉಡಾಳನು; ಸದಾ ಚಂಚಲ ಚಿತ್ತದವನು. ಸಾಲೆಗೆ ಹೋಗಹತ್ತಿದ ಬಳಿಕ ಈ ಹುಡುಗನ ಪಾಟಿ ಒಡೆ, ಆ ಹುಡುಗನ ಪುಸ್ತಕ ಹರಿ, ಇನ್ನೊಬ್ಬ ಹುಡುಗನೊಡನೆ ಹೊಡೆದಾಡು, ಮತ್ತೊಬ್ಬನಿಗೆ ಬಾಯಿಗೆ ಬಂದಂತೆ ಬೈಯು ಮುಂತಾದ ನಾನಾ ಕುಚೇಷ್ಟೆಗಳನ್ನು ಮಾಡಹತ್ತಿದನು. ಸ್ಕೂಲ ಮೇಷ್ಟರು ಸಿಟ್ಟುಮಾಡಿ ಹೇಳಿದರು, ಹೊಡೆದು ಬಡಿದು ಹೇಳಿದರು; ಏನಾದರೂ ಇವನು ಹಾದಿಗೆ ಬರುವವನಲ್ಲೆಂಬುದು ಅವರಿಗೆ ಮನವರಿಕೆಯಾದ ಕೂಡಲೆ ಇವನನ್ನು ಸಾಲೆಯಿಂದ ಹೊರಗೆ ಹಾಕಿದರು. ಸಾಲೆಯಲ್ಲಿಯ ಶಿತಿಕಂಠನ ಅವಗುಣಗಳನ್ನು ಕಂಡು, ಸಾಕಿದವರೂ ಅವನನ್ನು ತಮ್ಮ ಮನೆಯಿಂದ ಹೊರ ದೂಡಿದರು. ಕಡೆಗೆ ಅವನು ಒಂದು ರಾತ್ರಿಯಲ್ಲಿ ತನ್ನ ಪಾಲಕನ ಮನೆಯ ನೂರಾರು ರೂಪಾಯಿ ಬೆಲೆಯ ಜೀನಸುಗಳನ್ನು ಕದ್ದುಕೊಂಡು ಬೆಂಗಳೂರಿಗೆ ಬಂದನು! ತನ್ನ ಊರಲ್ಲಿರುವಾಗ ಶಿತಿಕಂಠನ ಶಿಕ್ಷಣವು ಹಾಗೂ ಹೀಗೂ ಇಂಗ್ಲೀಷ ೪ನೇ ಕ್ಲಾಸಿನ ವರೆಗೆ ಆಗಿತ್ತು.

ಬೆಂಗಳೂರಿಗೆ ಬಂದನಂತರ ಅವನು ಒಬ್ಬ ಸಭ್ಯ ಮಾಸ್ತರರ ಕೈಕಾಲು ಕಟ್ಟಿಕೊಂಡು, ತನ್ನನ್ನು ಇಂಗ್ಲಿಷ ೫ನೇ ಇಯತ್ತೆಯಲ್ಲಿ ಸೇರ್ಪಡಿಸಿಕೊಂಡನು. ಬೆಂಗಳೂರೊಳಗಿನ ಪೂರ್ಣಯ್ಯನ ಛತ್ರ, ಮತ್ತೊಂದೆರಡು ಛತ್ರಗಳ ಅಡಿಗೆ-ನೀರಿನವರನ್ನೂ, ಕಸ ಮುಸುರಿ ತೆಗೆಯುವವರನ್ನೂ ತನ್ನ ಜಾಲದಿಂದ ಒಲಿಸಿ, ತನ್ನ ಎರಡೂ ಹೊತ್ತಿನ ಗ್ರಾಸಕ್ಕೆ ಅನುಕೂಲ ಮಾಡಿಕೊಂಡನು. ಇದೇ ಕಾಲಕ್ಕೆ ಇವನಿಗೆ ಶ್ರೀಕಂಠನ ಭೆಟ್ಟಿಯಾಯಿತು. ಅವರೀರ್ವರೂ ತುಸ ಹೆಚ್ಚು-ಕಡಿಮೆ ಸಮ ವಯಸ್ಕರು. ಒಂದೇ ಕ್ಲಾಸಿನಲ್ಲಿ ಓದುವವರು. ಇಬ್ಬರೂ ತಮ್ಮ ಪಾಲಕರಿಂದ ದೂರ ಇರುವವರು. ಹೀಗಾಗಿ ಅವರೀರ್ವರಲ್ಲೂ ಸಖ್ಯವುಂಟಾಯಿತು. ತುಸ ದಿನಗಳಲ್ಲೇ ಶಿತಿಕಂಠನು ಶ್ರೀಕಂಠನನ್ನು ತನ್ನ ಜಾಲದಲ್ಲಿ ತೊಡಕಿಸಿದನು

ಬೆಂಗಳೂರಿಗೆ ಬಂದ ಮೇಲೆ ತುಸ ದಿನಗಳಲ್ಲಿಯೇ ತನ್ನಲ್ಲಿಯ ಹಣದಿಂದ ಶಿತಿಕಂಠನು ಒಂದು ಉತ್ತಮವಾದ ಉಡುವ ಪಂಜೀ ಜೋಡು, ಒಂದು ಜೋಡು ನಸುವಾದ ಸ್ಲೀಪರು, ಎರಡು ಒಳ್ಳೇ ಶರ್ಟು, ಒಂದು ಭವ್ಯವಾದ ಕೋಟು ಇಷ್ಟು ಜೀನಸುಗಳನ್ನು ಕೊಂಡುಕೊಂಡನು ಛತ್ರಕ್ಕೆ ಊಟಮಾಡಲಿಕ್ಕೆ ಹೋದಾಗ, ಸಾಲೆಗೆ ಹೋಗುವಾಗ ಅವನು ಆ ಉಡುಪುಗಳನ್ನು ಎಂದೂ ಧರಿಸುತ್ತಿರಲಿಲ್ಲ. ಆಗ ಹರಕು ಡ್ರೆಸ್ಸನ್ನೇ ಹಾಕಿಕೊಂಡು ನೋಡಿದವರಿಗೆಲ್ಲ

ತನ್ನಲ್ಲಿ ದಯೆಯುಂಟಾಗುವಂತೆ ನಟಿಸುತ್ತಿದ್ದನು; ಆದರೆ ದಿನಾಲು ಮುಂಜಾನೆಸಂಜೆಯಾದ ಕೂಡಲೆ ಅವನು ತನ್ನ ಕೋಟ, ಬೂಟ ಮುಂತಾದ ನಯನಮನೋಹರ ವೇಷವನ್ನು ಧರಿಸಿಕೊಂಡು ಚಿಕ್ಕಪೇಟೆ, ಬಳೇಪೇಟೆ, ಭೇಂಡೀಬಝಾರ, ಪ್ರಮೋದೋದ್ಯಾನ ಮುಂತಾದ ಕಡೆಗೆ, ಎಲ್ಲಿ ತರುಣ ಸ್ತ್ರೀಯರ, ವೇಶ್ಯಾಂಗನೆಯರ ಸುಳಿದಾಟವು ವಿಶೇಷವಾಗಿರುವದೋ, ಅಲ್ಲಲ್ಲಿ ಒಳ್ಳೇ ಝೋಕಿನಿಂದ ತಿರುಗಾಡುತ್ತಿದ್ದನು. ಹೀಗೆ ಅವನು ಪ್ರತಿನಿತ್ಯ ತಪ್ಪದೆ ತನ್ನ ವ್ರತವನ್ನು ನಡಿಸಹತ್ತಿದ ಬಳಿಕ ಅವನಿಗೆ ಯಾವಳೊಬ್ಬ ಶ್ರೀಮಂತ ತರುಣಿಯು ಮೋಹಿಸದಿದ್ದರೂ, ಅನಾಥಳೂ ಕೆಟ್ಟ ಚಾಳಿಯಿಂದ ವ್ಯ ಕೆಡಿಸಿಕೊಂಡು ಬಳಲುವವಳೂ ಆದ ಯಾವಳೊಬ್ಬ ಭಂಗಿಯ ಜಾತಿಯ ಮುದಿಹೆಂಗಸು ಒಲಿಯಲಾರಳೇ?

ಹೀಗೆ ಶಿತಿಕಂಠನು ದೊಡ್ಡ ಜಹಗೀರದಾರನಂತೆ ನಟಿಸಿ, ಹಲಕೆಲವು ಹೆಂಗಸರನ್ನು ಭ್ರಷ್ಟಗೊಳಿಸಿದನು. ಕಡೆಗೆ ಬೆಂಗಳೂರ ಬಳೇಪೇಟೆಯೊಳಗಿನ ಶಾಂತಮ್ಮನೆಂಬ ದಿನಹೋದ, ಆದರೆ ಮನೆತನಸ್ಥ ಹೆಣ್ಣುಮಗಳು ಇವನ ಜಾಲದಲ್ಲಿ ಸಿಕ್ಕಳು. ಇದೇ ಸಮಯಕ್ಕೆ ಶ್ರೀಕಂಠನೂ ಸಿಲೋನಿಗೆ ತೆರಳಿದನು. ಶಾಂತಮ್ಮನು ಮಧ್ಯಮವಿತ್ತದ ಕುಟುಂಬಸ್ಥಳು. ಅವಳಿಗೆ ಸುಕುಮಾರಿ ಎಂಬೊಬ್ಬಳೇ ಮಗಳಿದ್ದಳು. ಸುಕುಮಾರಿಗೆ ಆಗ ೧೪ ವರ್ಷ ತುಂಬಿ ೧೫ರಲ್ಲಿ ಬಿದ್ದಿತ್ತು. ಶಾಂತಮ್ಮನ ಹೊರತು ಮನೆಯಲ್ಲಿ ವ್ಯವಸ್ಥೆಯನ್ನು ನೋಡುವವರಾರೂ ಇರಲಿಲ್ಲ. ಕುತ್ತಿಗೆಗೆ ಬಂದ ತನ್ನ ಮಗಳನ್ನು ಲಗ್ನಮಾಡಿಕೊಂಡು ಅವಳ ನೆರೆ ತಪ್ಪಿಸುವವರಾರಾದರೂ ಸಿಗುವರೇನೆಂದು ಅವಳು ನಿರೀಕ್ಷಿಸುತ್ತಿದ್ದಳು. ಶಿತಿಕಂಠನ ಭವ್ಯಪೋಷಾಕಿನ ಸವಾರಿಯು ದಿನಾಲು ಅವರ ಮನೆಯ ಎಡಬಲಗಳಲ್ಲಿ ತಾಸೆರಡು ತಾಸಾದರೂ ಸುಳಿದೇ ಸುಳಿಯುತ್ತಿತ್ತು. ಒಂದು ದಿನ ತನ್ನ ಋಣಾನುಬಂಧಿಕರ ಮುಖಾಂತರ ಶಾಂತಮ್ಮನು ಶಿತಿಕಂಠನನ್ನು ತಮ್ಮ ಮನೆಗೆ ಕರೆಯಿಸಿ, ಅವನ ಸ್ಥಿತಿಗತಿಗಳನ್ನು ಕೇಳಿದಳು. ಆ ಬುರುಡೀ ಸಂಗನು ತನ್ನ ಪರಿಚಯವನ್ನು ಆ ಭೋಳೇ ಭಾವಿಕಳಿಗೆ ಈ ಪ್ರಕಾರ ಮಾಡಿಕೊಟ್ಟನು. ಅದೆಂತೆನೆ:—

"ನಾನು ಶಿವಮೊಗ್ಗ ಜಿಲ್ಲೆಯೊಳಗಿನ ಒಬ್ಬ ಜಹಗೀರದಾರನ ಒಬ್ಬನೇ ಒಬ್ಬನಾದ ಮಗನು. ಪ್ರತಿವರ್ಷಕ್ಕೆ ೧೦ ಸಾವಿರ ರೂಪಾಯಿಗೆ ಕಡಿಮೆಯಿಲ್ಲದಷ್ಟು ನಮ್ಮ ಜಹಗೀರಿನ ಹುಟ್ಟುವಳಿಯಿದೆ. ಇದೇ ಸಲ ನಾನು ಮ್ಯಾಟ್ರಿಕ್ಕಿನಲ್ಲಿ ಪಾಸಾಗತಕ್ಕವನು; ಆದರೆ ಒಂದೇ ವರ್ಷದಲ್ಲಿ ಅಭ್ಯಾಸಮಾಡಿ, ಪಾಸಾದರೆ, ವಿಷಯಗಳು ನೆಟ್ಟಗಾಗದೆ ಮುಂದೆ ನಾನು ಹೋಗಬೇಕಾಗಿದ್ದ ಆಯ್. ಸಿ. ಎಸ್. ಪರೀಕ್ಷೆಗೆ ಪರಿಣಾಮದಾಯಕಗಳಾಗುವದಿಲ್ಲ. ಆದ್ದರಿಂದ ಇನ್ನು

ಒಂದೆರಡು ವರ್ಷ ಅಭ್ಯಾಸ ಮಾಡಿದ ನಂತರವೇ ಪರೀಕ್ಷೆಗೆ ನಿಲ್ಲುವೆನು.'' ಇತ್ಯಾದಿ ಸಂಗತಿಯನ್ನು ಕೇಳಿ, ಆ ಬಡ ಶಾಂತಮ್ಮನ ಬಾಯಿಗೆ ನೀರೊಡೆಯಿತು. ಅವಳು ಅವನನ್ನು ಆಗಾಗ್ಗೆ ತನ್ನ ಮನೆಗೆ ಕಾಫಿ-ತಿಂಡಿಗಾಗಿ ಕರೆಯಲಾರಂಭಿದಳು. ನಿದ್ದೆ ಬಂದವರಿಗೆ ಹಾಸಿಕೊಟ್ಟ ಹಾಗೆ ಶಿತಿಕಂಠನಿಗೆ ಅಲ್ಲಿ ತನ್ನ ಚುಂಚು ಪ್ರವೇಶ ಮಾಡಲಿಕ್ಕೆ ಬಹು ಅನುಕೂಲವಾಯಿತು. ಅವನು ಆ ತಾಯಿ-ಮಗಳಿದುರಿಗೆ ದಿನಾಲು ಹೊಸ ಹೊಸ ಬುರುಡಿಗಳನ್ನುರುಳಿಸಿ, ತನ್ನನ್ನು ಅವರು ಸಂಪೂರ್ಣವಾಗಿ ನಂಬುವಂತೆ ಮಾಡಿಕೊಂಡನು. ಪಾಪ! ಆ ಬಡ ಹೆಣ್ಣುಮಗಳಿಗೇನು? ಈ ಜಹಗೀರದಾರರ ಮಗನು ತನ್ನ ಮಗಳನ್ನು ವರಿಸಿದರೆ, ತನ್ನ ಮಗಳ ದೈವವು ತೆರೆಯುವದೆಂದು ನಂಬಿದಳು. ಬರಬರುತ್ತ ಶಿತಿಕಂಠನು ಅವರ ಮನೆಗೆ ದಿನದೊಳಗೆ ನಾಲ್ಕು ನಾಲ್ಕು ಸಾರೆ ಬರ ಹೋಗಹತ್ತಿದನು. ಸುಕುಮಾರಿಯೂ ಅವನೊಡನೆ ಹೆಚ್ಚು ಸಲಿಗೆಯಿಂದ ನಡೆಯಹತ್ತಿದಳು. ಆ ಹೆಚ್ಚಿನ ಸಲಿಗೆಯಿಂದಲೇ ಸುಕುಮಾರಿಯ ಆ ಜನ್ಮದ ಎಲ್ಲ ನಾಡಿಗಳೂ ಸೈಲಾಗಿ ಹೋದವು! ಆ ನವತರುಣಿಯು ಶಿತಿಕಂಠನ ಮಿಷ್ಟಭಾಷಣಕ್ಕೆ ಮನಸೋಲಲು, ಅವಳ ಕಾಲು ಜಾರಿತು!

ಯಾವ ಹುಳುಕನ್ನೂ ಅರಿಯದ ಶಾಂತಮ್ಮನಿಗೆ ಈ ಸಂಗತಿಯು ತಿಳಿಯದು; ಹಾಗು ಈ ಪ್ರಕಾರ ಇವರಲ್ಲಿ ಲಗ್ನವಾಗುವದಕ್ಕೆ ಮುಂಚೆಯೇ ಶರೀರ ಸಂಬಂಧವುಂಟಾದೀತೆಂಬುದು ಆ ದಿನಹೋದ ಪ್ರಾಕೃತಗಳಿಗೆ ಹೇಗೆ ಗೊತ್ತಾಗಬೇಕು? ಈ ತರುಣನು ನನ್ನ ಮಗಳನ್ನು ಲಗ್ನವಾದರೆ ವೃದ್ಧಾಪ್ಯದಲ್ಲಿ ಇವನೇ ತನ್ನನ್ನು ಸಂರಕ್ಷಿಸಬಹುದೆಂಬ ಉಚ್ಚ ಕಲ್ಪನೆಯಲ್ಲಿ ಅವಳು ಲೀನಳಾಗಿದ್ದಳು. ಸುಕುಮಾರಿಯು ಶಿತಿಕಂಠನ ಕಾಮೇಚ್ಛೆಗೆ ಬಲಿಯಾಗಿದ್ದರೂ, ಇಂದಿಲ್ಲ ನಾಳೆ ಇವನು ತನ್ನನ್ನು ಲಗ್ನವಾಗೇ ಆಗುವನೆಂದು ಜಗತ್ತಿನ ಅನುಭವವಿಲ್ಲದ ಆ ಹುಂಬ ಹುಡುಗಿಯ ತಿಳುವಳಿಕೆಯಾಗಿದ್ದಿತು; ಮತ್ತು ಅದಕ್ಕಾಗಿಯೇ ಅವಳು ಲಗ್ನತಿಥಿಯ ನಿಶ್ಚಯಕ್ಕಾಗಿ ಶಿತಿಕಂಠನನ್ನು ಹೆಚ್ಚಾಗಿ ಪೀಡಿಸತೊಡಗಿದ್ದಳು; ಆದರೆ ನಮ್ಮ ನೀಚ ಶಿತಿಕಂಠನು ಅವಳಿಗೇನೇನೋ ನೆವ ಹೇಳಿ, ದಿನಾಲು ತನ್ನ ಕೆಲಸಕ್ಕೆ ವಿಘ್ನವಾಗದ ಹಾಗೆ ಮಾಡಿಕೊಳ್ಳುತ್ತಿದ್ದನು.

ಶ್ರೀಕಂಠನು ಸಿಲೋನಕ್ಕೆ ತೆರಳಿ ೧-೧॥ ವರ್ಷವಾಯಿತು. ಅವನಿಂದ ತಿಂಗಳೆರಡು ತಿಂಗಳುಗಳಿಗೆ ಶಿತಿಕಂಠನಿಗೆ ಕ್ಷೇಮಸಮಾಚಾರದ ಪತ್ರ ಬರುತ್ತಿತ್ತು; ಆದರೆ ಶಿತಿಕಂಠನ ಮೊಳೆ ಉದ್ದನ್ನ ಜಾಬಾಳ ಸಂಗತಿಯ ಪತ್ರಗಳು ಶ್ರೀಕಂಠನ ಹೆಸರಿಗೆ ಎಂಟೆಂಟು ದಿನಗಳಿಗೊಮ್ಮೆ ಹೋಗತೊಡಗಿದ್ದವು; ಆತನ ಆ ಅಷ್ಟುದ್ದ ಪತ್ರಗಳಲ್ಲಿ ಅನೇಕ ರಗಳೆಗಳಿದ್ದು, ನಾನು ಇಂತಿಷ್ಟು ಅಡಚಣಿಯಲ್ಲಿ

ಕುವೆನು; ಹಣ ಕಳಿಸು. ಇಷ್ಟೇ ಮುಖ್ಯ ಸಂಗತಿಯಿರುತ್ತಿತ್ತು. ಸುಕುಮಾರಿ ಗಂತೂ ದಿನಗಳು ಹೆಚ್ಚುತ್ತ ಹೋಗಿ ಕೆಲ ಮಾಸಗಳೂ ತುಂಬಿದವು. ಶಿತಿಕಂಠನು ಲಗ್ನದ ಮುಹೂರ್ತವನ್ನು ಮುಂದೆ ಹಾಕುತ್ತಲೇ ಇದ್ದನು. ಮಗಳಿಗೆ ೩-೪ ತಿಂಗಳು ಸಂದಬಳಿಕ ತಾಯಿಗೂ ಸಂಶಯ ಬಂತು. ಅವಳಿಗೆ ಮಗಳು ಎಲ್ಲ ಸಂಗತಿಯನ್ನು ತಿಳಿಸಲು, ಇನ್ನು ತಡಮಾಡಿದರೆ, ಜನರೊಳಗೆ ಮಾರಿ ತೋರಿಸ ಲಿಕ್ಕೇ ಸಾಧ್ಯವಿಲ್ಲೆಂದು ಬಗೆದು, ಒಂದು ದಿನ ಅವಳು ಶಿತಿಕಂಠನಿಗೆ ಆ ವಿಷಯ ವಾಗಿ ಚೆನ್ನಾಗಿ ತೊಡರಿದಳು. ಆಗ ಅವನು:— ನನ್ನ ಊರಿಗೆ ನಾನು ಈ ಬಗ್ಗೆ ಎಷ್ಟೋ ಪತ್ರ ಬರೆದಿರುತ್ತೇನೆ. ಅವರಿಂದ ಜವಾಬುಗಳು ಬರುತ್ತಿದ್ದು, ಅವರು ಬರಲೇ ಒಲ್ಲರು. ಆದುದರಿಂದ ನಾನು ಇಂದು ಹೋಗಿ ೧-೨ ದಿನ ಗಳಲ್ಲೇ ಎಲ್ಲರನ್ನು ಕರಕೊಂಡು ಬರುವೆನು. ನನ್ನ ರೂಪಾಯಿಗಳು ಬ್ಯಾಂಕಿ ನಲ್ಲಿವೆ. ಬ್ಯಾಂಕಿಗೆ ಈ ದಿನ ಸೂಟಿ. ಆದುದರಿಂದ ನೀವು ನನಗೆ ಗಾಡಿ ಖರ್ಚಿ ಗಾಗಿ ಈಗ ೨೦ ರೂ. ಕೊಡಿರಿ. ನಾನು ಬಂದ ಕೂಡಲೆ ನಿಮ್ಮ ರೂಪಾಯಿ ಗಳನ್ನು ನಿಮಗೆ ವಾಪಸು ಕೊಡುವೆನು; ಇಲ್ಲವೆ ನನ್ನ ವರದಕ್ಷಿಣೆಯಲ್ಲಾದರೂ ಮುರಿಯುವಿರಂತೆ! ಎಂದು ಮಾತನಾಡಿ ಆ ತಾಯಿ-ಮಕ್ಕಳ ಮೂಗಿಗೆ ತುಪ್ಪ ಹಚ್ಚಲು, ಆ ಬಡ ಹೆಂಗಳೆಯರು ಯಾರಲ್ಲಿಯೋ ಸಾಲ ಮಾಡಿ ತಂದು ೨೦ ರೂಪಾಯಿ ವರದಕ್ಷಿಣೆಯ ಸಂಚಕಾರವೆಂದು ಅವನಿಗೆ ಕೊಟ್ಟರು!

ಇನ್ನು ಈ ಬೆಂಗಳೂರಲ್ಲಿದ್ದರೆ ಈ ಸುಕುಮಾರಿಯ ಪ್ರಕರ್ಣವು ನನ್ನ ಮೈಗೇ ಅಂಟಿಕೊಳ್ಳುವದೆಂದು ಬಗೆದು, ಆ ಧೂರ್ತನು ಅಲ್ಲಿಂದ ದಕ್ಷಿಣ ದೇಶ ದಲ್ಲಿಯ ಧರ್ಮಪ್ರಚಾರಕ ಮಠಕ್ಕೆ ಶಿಷ್ಯನಾಗಿ ಹೋದನು. ಅಲ್ಲಿಯೂ ಕೆಲ ದಿನಗಳಲ್ಲಿ ಹಲಕೆಲವು ಅಂತಿಂಥ ದುಷ್ಟ ಕೆಲಸಗಳನ್ನೇ ಮಾಡಿ, ತದನಂತರ ಈ ಕಥಾನಕದ ಪ್ರಾರಂಭದಲ್ಲಿ ಹೇಳಿದಂತೆ ನಮ್ಮೂರಿಗೆ ಬಂದು, ನಮ್ಮಲ್ಲಿಯ ತನ್ನ ನೀಚತನವನ್ನು ಚೆನ್ನಾಗಿ ಪ್ರಕಟಿಸದನು. ಬೆಂಗಳೂರಿಂದ ಬರುವಾಗಲೇ ಅವನು ತನ್ನ ಒಬ್ಬ ಸಹಚರನನ್ನು ಅವೋಗವ್‌ನನ್ನು............ಊರಲ್ಲಿಟ್ಟು ನಮ್ಮೂ ರಿಗೆ ಬಂದಿದ್ದನು. ಅವನು ನಮ್ಮೂರಿಂದ ತನ್ನ ಜಹಗೀರದಾರ ತಂದೆಗೆ ಬರೆ ಯಲ್ಪಟ್ಟ ಪತ್ರಗಳು ಆ ಸಹಚರನ ಹಸ್ತಗತವಾಗುವವು; ನಮ್ಮಲ್ಲಿಗೆ ಬರುತ್ತಿದ್ದ ಪತ್ರಗಳಾದರೂ ಆ ಸಹಚರನಿಂದ ರವಾನಿಸಲ್ಪಟ್ಟ ಪತ್ರಗಳೇ. ನಮ್ಮೂರ ಆ ಮನೆಯ ಹೆಂಗಸರ ಶೀಲಕ್ಕೆ ಕಲಂಕ ಹಚ್ಚಿ, ಅವರ ಉಪವರ ವಧುವನ್ನು ಒಬ್ಬ ಕುರಕನಿಗೆ ಮಾರಿದ್ದಾದರೂ ಆ ಶಿತಿಕಂಠನ, ಅವನ ಸಹಚರನಾದ ಅರವುಭಾಷೆ ಮಾತಾಡುವ ಹಾಗು ಝುಟಕಾದವನ ವೇಷದಿಂದ............ ಆ ಊರಲ್ಲಿರು ತ್ತಿದ್ದ ಆ ಅವೋಗವ್‌ನ ಕೃತ್ಯಗಳೆಂಬುದು ನಮ್ಮ ವಾಚಕರಿಗೀಗ ಬರೆದು

ತಿಳಿಸುವ ಕಾರಣವಿರಲಿಲ್ಲ.

ನವಮ್ಮೂರಿಂದ ತೆರಳುವಷ್ಟರಲ್ಲಿ ಶಿತಿಕಂಠನಿಗೆ ಶ್ರೀಕಂಠನ ಪತ್ರ ತಲುಪಿತು. ಅದರಲ್ಲಿ ಹೀಗೆ ಬರೆದಿತ್ತು:—ನೀನು ಅಲ್ಲಿದ್ದರೆ ನಿನ್ನ ಖರ್ಚಿನ ಎಲ್ಲ ವ್ಯವಸ್ಥೆ ಮಾಡುವದು ನನಗೆ ಸಾಧ್ಯವಿಲ್ಲ; ಆದರೂ ನಿನ್ನನ್ನು ಬಿಟ್ಟು ಬಿಡಬೇಕೆಂದು ನನ್ನ ಇಚ್ಛೆಯಿಲ್ಲ; ಆದುದರಿಂದ ನಿನಗಾಗಿ ಇಲ್ಲಿಯ ಮಿಲಿಟರಿಯಲ್ಲಿ ಒಂದು ಕೆಲಸ ನೋಡಿರುವೆನು. ಇಲ್ಲಿ ಸದ್ಯಕ್ಕೆ ನಿನಗೆ ೧೦೦ ರೂಪಾಯಿ ತಲಬೂ, ಊಟ-ಉಡಿಗೆಯ ಭತ್ತೆಗಳೂ ದೊರೆಯುವವು; ಅಲ್ಲದೆ ಆಗಾಗ್ಗೆ ಸಂಬಳವು ಹೆಚ್ಚುವದು; ಆದುದರಿಂದ ಈ ಪತ್ರ ಮುಟ್ಟಿದ ಕೂಡಲೆ ನೀನು ಇಲ್ಲಿಗೆ ಹೊರಟು ಬಾ. ನಿನ್ನ ರೈಲ ಹಾಗು ಬೋಟಿನ ಖರ್ಚಿಗಾಗಿ ನಿನ್ನ ಒಂದು ತಿಂಗಳ ಮುಂಗಡ ಸಂಬಳವನ್ನೂ, ಪ್ಯಾಸಪೋರ್ಟನ್ನೂ ಇದರೊಂದಿಗೆ ಕಳಿಸಿದೆ. ತೀವ್ರ ಬಾ ಅಲ್ಲಿಂದ ಹೊರಡುವ ಮೊದಲು ಮೋಲುಕೋಟಿಗೆ ಹೋಗಿ ನನ್ನ ತಂದೆ ಯನ್ನು ಕಂಡು ಬಾ. ಎಂಬ ಸಂಗತಿಯನ್ನು ಓದಿದ ಕೂಡಲೆ, ಈ ಮೊದಲೇ ತನ್ನ ಅಪಕೀರ್ತಿಯು ಬೆಂಗಳೂರ ಶಹರ, ದಕ್ಷಿಣದೇಶದ ಮಠ, ನವಮ್ಮೂರ ಪ್ರಾಂತಗಳಲ್ಲಿ ಹಬ್ಬಿದ್ದ ಆದಾವ ಧೂರ್ತನು ಈ ಸುಸಂಧಿಯನ್ನು ಕಳಕೊಂಡಾನು? ಆ ಪತ್ರ ಬಂದ ಮರುದಿನವೇ ಅವನು ಬೆಂಗಳೂರಿಗೆ ಕೂಡ ಹೋಗದೆ, ನವಮ್ಮೂರಿಂದ ನೆಟ್ಟಗೆ ಮೋಲುಕೊಟಿಗೆ ಹೋಗಿ, ಅಲ್ಲಿಂದ ಹುಬ್ಬಳ್ಳಿ, ಗುಂತಕಲ್ಲ, ಮದ್ರಾಸ ಮಾರ್ಗವಾಗಿ ಸಿಲೋನಕ್ಕೆ ಜಿಗಿದು ಬಿಟ್ಟನು.

ದಿನಗಳು ಹೆಚ್ಚುತ್ತ ಹೋದಂತೆ ಸುಕುಮಾರಿಯು ಗಾಬರಿಯಾಗಹತ್ತಿದಳು. ಶಾಂತಮ್ಮನಿಗಂತೂ ಮರಣಸದೃಶ ದುಃಖವಾಯಿತು ಓಣಿಯೊಳಗಿನ ಜನರಿಗೆ ಮೋರೆ ಕೂಡ ತೋರಿಸದ ಸ್ಥಿತಿಯು ಆ ತಾಯಿ-ಮಗಳಿಗೆ ಪ್ರಾಪ್ತವಾಯಿತು. ಅವರು ಶಿತಿಕಂಠನಿಗೆ ಬಾಯಿಗೆ ಬಂದಂತೆ ಬೈದರು, ಅಂದರು. ಏನಾದರೂ ಊರೊಳಗಿನ ಸಜಾತಿಯ ಜನರು ಶಾಂತಮ್ಮನ ಮನೆಗೆ ಬಹಿಷ್ಕಾರ ಹಾಕಿದರು. ಅವಳು ಮಗಳ ಮೇಲೆ ಎಷ್ಟು ಹಲ್ಲು ಕಡಿಯುತ್ತಿದ್ದರೂ, ತಾಯಿಯ ಕರುಳೇ ಅದು. ಅದರಿಂದ ಅವಳು ನವಮಾಸಗಳು ತುಂಬಿದ ಒಳಿಕ ಮಾಡಬೇಕಾದ ಸಿದ್ಧತೆಯನ್ನೆಲ್ಲ ಮಾಡಿ, ಮಗಳನ್ನೊಮ್ಮೆ ಆ ಪ್ರಸವ ವೇದನೆಯಿಂದ ಮುಕ್ತಮಾಡಿದಳು. ಸುಕುಮಾರಿಗೆ ಸುಂದರ ಸುಕುಮಾರ ಪುತ್ರನೇ ಹುಟ್ಟಿದ್ದನು; ಆದರೆ ತನ್ನ ಅಸ್ತಿತ್ವದಿಂದ ತನ್ನ ತಾಯಿಯ ಭ್ರಷ್ಟತನಕ್ಕೆ ಮೂರ್ತಿಮಂತ ಸಾಕ್ಷಿಯಾಗಿ, ಅವಳ ದುಃಖವನ್ನು ಹೆಚ್ಚಿಸುತ್ತ ಜೀವಿಸುವದು ಸೇರದ್ದರಿಂದಲೋ, ಏನೋ ಆ ರನ್ನದಂತಹ ಶಿಶುವು ಬೆಳಗಾಗುವಷ್ಟರಲ್ಲಿಯೇ ಭೂಮಿಯಲ್ಲಿ ಅಡಗಿಬಿಟ್ಟಿತು! ಆ ಶೋಕಸಂವಸಾಯಿಕ ಪ್ರಸಂಗದಿಂದ ಶಾಂತಮ್ಮನ

ಹೃದಯಕ್ಕೆ ಧಕ್ಕೆ ಬಡಿಯಿತು.

ಮುಂದೆ ಕೆಲ ದಿನಗಳಲ್ಲಿಯೇ ಶಾಂತವ್ವನು ಒಂದು ದಿನ ರಾತ್ರಿ ಓಣಿಯೊಳಗಿನವರಾರಿಗೂ ಗೊತ್ತಾಗದಂತೆ ಬೆಂಗಳೂರನ್ನು ಬಿಟ್ಟು, ಮೈಸೂರಿಗೆ ಹೋಗಿ, ಹಳೇ ಇಟ್ಟಿಗೇಗೂಡಿನ ಒಂದು ಗಲೀಜು ಗಲ್ಲಿಯಲ್ಲಿ ಮನೆಮಾಡಿಕೊಂಡಿರಹತ್ತಿದಳು; ಆದರೆ ಅವಳ ಮನಸ್ಸಿಗೆ ಈ ಮೊದಲಾದ ಆಘಾತದಿಂದ ಅವಳು ಮುಂದೆ ಹೆಚ್ಚು ದಿನಗಳವರೆಗೆ ಬದುಕಲಿಲ್ಲ. ತಿಂಗಳೊಪ್ಪತ್ತಿನಲ್ಲಿಯೇ ಶಿತಿಕಂಠನನ್ನು ಶಾಪಳಿಸುತ್ತ ಈ ನಶ್ವರ ಲೋಕವನ್ನು ತ್ಯಜಿಸಿದಳು! ತಾಯಿಯು ಗತಿಸಿದ ಬಳಿಕ ಸುಕುಮಾರಿಗೆ ತನ್ನ ಸ್ವೈರವಾಜಿವಿ ನಡತೆಯ ಬಗ್ಗೆ ಪಶ್ಚಾತ್ತಾಪವಾಯಿತು. ಆಕೆಯನ್ನು ಇನ್ನು ಯಾರೂ ಲಗ್ನವಾಗುವಂತಿರಲಿಲ್ಲ. ತಾಯಿಯ ಹೊಲ-ಮನೆಗಳ ಆಸ್ತಿಯನ್ನೆಲ್ಲ ದಾಯಾದಿಗಳು ಅಪಹರಿಸಿದರು. ಆದರಿಂದ ಹೊಟ್ಟೆಯ ಪಾಡಿಗಾಗಿ ಅವಳು ಇನ್ನು ಡಾಣಾಡಂಗುರವಾಗಿ ವೇಶ್ಯಾವೃತ್ತಿಯನ್ನೇ ಸ್ವೀಕರಿಸಬೇಕಾಯಿತು. ಇಷ್ಟೆಲ್ಲ ತನ್ನ ಅಧಃಪತನಕ್ಕೆ ಕಾರಣನಾದ ಆ ಘಾತುಕ ಶಿತಿಕಂಠನನ್ನು ಕೊನೆಗಾಣಿಸುವ ವರೆಗೆ ಜೀವಿಸಿದ್ದು, ಆ ತನ್ನ ಮನೋಸಂಕಲ್ಪವು ಕೊನೆಗಂಡ ಮರುದಿನವೇ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಅವಳು ನಿರ್ಧರಿಸಿದಳು.

ಶ್ರೀಕಂಠನು ತನ್ನ ತಂದೆಗೆ ಪ್ರತಿ ತಿಂಗಳಿಗೆ ಸಾಕಷ್ಟು ಹಣವನ್ನು ತಪ್ಪದೆ ಕಳಿಸುತ್ತಿದ್ದರೂ, ಪತ್ನಿಯ ನಿಧನದ ಮೂಲಕ ಹಾಗು ಅಣ್ಣನ ದುಷ್ಟತನದ ಮೂಲಕ ಅವನ ಮನಸ್ಸಿಗುಂಟಾದ ಚಿಂತೆಯು ಅವನನ್ನು ಚಿತೆ(ಬೆಂಕಿ)ಯ ಮೇಲೆ ಮಲಗಿಸುವವರೆಗೂ ತೊರೆದಿರಲಿಲ್ಲ. ಶಿತಿಕಂಠನನ್ನು ಸಿಲೋನಕ್ಕೆ ಕರೆಸಿಕೊಂಡ ತುಸ ದಿನಗಳಲ್ಲಿಯೇ ಶ್ರೀಕಂಠನಿಗೆ ವಿಷಮಜ್ವರ ಬರಹತ್ತಿದವು. ವಿದೇಶದಲ್ಲಿ ಯಾರು ಯಾರಿಗೆ ಆಗುವರು? ಆದರೆ ಪರಮಾಪ್ತನಂತಿರುವ ಶಿತಿಕಂಠನು ತನ್ನ ಬಳಿಯಲ್ಲಿರುವನಲ್ಲಾ, ಎಂಬ ಧೈರ್ಯದಿಂದ ಶ್ರೀಕಂಠನು ೪-೬ ದಿನಗಳನ್ನು ಕಳೆಯುತ್ತಿರಲು, ಅವನ ತಂದೆಯ ಮರಣವಾರ್ತೆಯು ಅಂಥ ಆ ಜಡ್ಡಿನಲ್ಲಿಯೇ ಅವನಿಗೆ ತಿಳಿಯಿತು. ಅದರಿಂದ ಅವನ ಪ್ರಾಣವ್ಯಾಕುಲವಾಗಿ ಅವನಿಗೆ ಒಮ್ಮೆಲೆ ವಾತವಿಕಾರವಾಯಿತು. ಶ್ರೀಕಂಠನಿಗೆ ಮೈಮೇಲೆ ಎಚ್ಚರಿಕೆಯಿರುವ ವರೆಗೆ ಶಿತಿಕಂಠನು ಅವನ ಶುಶ್ರೂಷೆ ಮಾಡುತ್ತಿದ್ದನು. ಅವನು ಸನ್ನಿಪಾತಕ್ಕೆ ಗುರಿಯಾಗಿ ಸ್ಮೃತಿತಪ್ಪಲು, ಇವನು "ಮೊಸಳೆ ಮರಳ್ಯವನ ನುಂಗಿತು | ಪಿಸುಣಂಗುಪಕಾರ ಮಾಡೆ ತಪ್ಪದು ಕೇಡು" || ಎಂಬ ಅನುಭವೋಕ್ತಿಯಂತೆ ವರ್ತಿಸಲಾರಂಭಿಸಿದನು.

ಶಿತಿಕಂಠನು ಸಿಲೋನಕ್ಕೆ ನಡೆದಾಗ ಶ್ರೀಕಂಠನ ತಂದೆಯು ಎಂಕ್ಯಾ

ಮಾವನಿಂದ ತನಗೆ ಬರಬೇಕಾದ ಆಸ್ತಿ, ಅದರ ಸರಕಾರೀ ಉತಾರಗಳು, ತಮ್ಮ ವಂಶಾವಳಿ ಹಾಗು ಇತರ ಎಷ್ಟೋ ಮಹತ್ವದ ಕಾಗದ-ಪತ್ರ ಇವುಗಳನ್ನು ಶಿತಿಕಂಠನ ಕೈಯಲ್ಲಿ ಕೊಟ್ಟು, ಅವುಗಳ ಮಹತ್ವವನ್ನು ಶ್ರೀಕಂಠನಿಗೆ ತಿಳಿಸುವ ಸಲುವಾಗಿ ಒಡೆದು ಹೇಳಿ ಕಳಿಸಿದ್ದನು. ಅವುಗಳನ್ನು ಶಿತಿಕಂಠನು ಶ್ರೀಕಂಠನಿಗೆ ಕೊಟ್ಟು, ಅವನ ತಂದೆಯು ಹೇಳಿದ ಸಮಗ್ರ ಸಂಗತಿಯನ್ನು ಹೇಳಿದ್ದನು. ಶ್ರೀಕಂಠನ ತಂದೆಯು ಮೇಲುಕೋಟೆಯಲ್ಲಿ ಸತ್ತನಂತರ, ಶ್ರೀಕಂಠನು ಸಿಲೋನದಲ್ಲಿ ಸನ್ನಿಪಾತದಿಂದ ಸಾಯಲಿಕ್ಕನುವಾದನಂತರ ಈ ಘಾತುಕ ಶಿತಿಕಂಠನು ಆ ಕಾಗದ-ಪತ್ರಗಳಿಂದ ಆಗಬಹುದಾದ ಲಾಭವನ್ನು ಮಾಡಿಕೊಳ್ಳದೆ ಬಿಟ್ಟಾನೇ? ಶ್ರೀಕಂಠನು ಸ್ಮೃತಿದಪ್ಪಿ ಬಿದ್ದಕೂಡಲೆ ಇವನು ಅವನ ಟ್ರಂಕಿನೊಳಗಿನ ಆ ಮಹತ್ವದ ಕಾಗದ-ಪತ್ರ, ಅವನಲ್ಲಿಯ ನಗದು ಹಣ ಮುಂತಾದವುಗಳನ್ನು ಎತ್ತಿಹಾಕಿ, ಒಂದುದಿನ ರಾತ್ರಿ ಸಿಲೋನದಿಂದ ಹೊರಟು ಬೆಂಗಳೂರಿಗೆ ಬಂದನು. ಬೆಂಗಳೂರಲ್ಲಿ ಇವನಿಗೆ ಇವನ ಪೂರ್ವಪರಿಚಿತನಾದ ಆಪೋರ್ಗಸ್ತನು ಕೂಡಲು, ಅವನೊಡನೆ ಮೈಸೂರಿಗೆ ಬಂದು ಎಂಕ್ಯಾಮಾವನ ಬಂಗ್ಲೆಯ ಸುತ್ತುಮುತ್ತು ವಾಲ್ಕಾರು ಸಾರೆ ತಿರುಗಾಡಿ, ಅಲ್ಲಿದ್ದ ಸುಶೀಲೆ, ಎಂಕ್ಯಾಮಾವ ಇವರನ್ನು ನೋಡಿಕೊಂಡು, ತನ್ನ ಮುಂದಿನ ಬೇತನ್ನು ಸಿದ್ಧಪಡಿಸಿದನು. ಶ್ರೀಕಂಠನಂತೂ ಸೀಲೋನದಲ್ಲಿ ಇಷ್ಟರಲ್ಲಿ ತೀರಿಕೊಂಡಿರಲಿಕ್ಕೆ ಸಾಕು. ಈ ಎಂಕ್ಯಾಮಾವನೊಬ್ಬನನ್ನು ಕೊಂದರೆ, ತನ್ನಲ್ಲಿರುವ ಕಾಗದ-ಪತ್ರಗಳ ಮುಖಾಂತರ ತಾನೇ ಶ್ರೀಕಂಠನೆಂದು ಈ ಎಂಕ್ಯಾಮಾವನ ಎಲ್ಲ ಆಸ್ತಿಗೆ ಮಾಲಕನಾಗಿ, ಸುಶೀಲೆಯನ್ನು ಲಗ್ನವಾಗಬೇಕೆಂದು ಶಿತಿಕಂಠನ ಸಾಹಸವಿದ್ದಿತು.

ಮೈಸೂರಿಗೆ ಬಂದನಂತರ ಒಂದುದಿನ ಒಂದು ದಾರಿಯಲ್ಲಿ ಶಿತಿಕಂಠನು ಸುಕುಮಾರಿಯ ದೃಷ್ಟಿಗೆ ಬಿದ್ದನು. ಈ ವರೆಗೆ ಶಿತಿಕಂಠನು ಸುಕುಮಾರಿಯಂಥ ಎಷ್ಟೋ ಜನಹೆಂಗಸರನ್ನು ಮನೆತಪ್ಪಿಸಿದವನಾದುದರಿಂದ, ಅವನಿಗೆ ಇಂಥ ಒಬ್ಬ ಸುಕುಮಾರಿಯ ನೆನಪು ಹಾಗು ಗುರುತು ಉಳಿಯುವ ಸಂಭವವಿರಲಿಲ್ಲ. ಅದರಿಂದ ಅವನಿಗೆ ಇವಳ ಗುರುತು ಹತ್ತಲಿಲ್ಲ; ಆದರೆ ತನ್ನ ಜೀವನಸರ್ವಸ್ವವನ್ನು ನಾಶಗೊಳಿಸಿದ ತನ್ನ ವೈರಿಯನ್ನು, ಸುಕುಮಾರಿಯಂಥ ಛಲತೊಟ್ಟ ಹೆಂಗಸು ಮರೆಯುವ ಬಗೆ ಹೇಗೆ? ಸುಕುಮಾರಿಯು ಶಿತಿಕಂಠನನ್ನು ದೃಷ್ಟಿಸಿದಾಗ ಅವನೊಡನೆ ಆಪೋರ್ಗಸ್ತನೂ ಇದ್ದನು. ಇವಳ ಹಾಗು ಆಪೋರ್ಗಸ್ತನ ದೃಷ್ಟಾದೃಷ್ಟಗಳೂ, ಮಾತು-ಕಥೆಗಳೂ, ಆ ಮೊದಲು ಹಲಕೆಲವು ಸಾರೆ ನಡೆದಿದ್ದವು. ಇಷ್ಟಲ್ಲದೆ ಪ್ರತಿಯೊಬ್ಬರ ಬಿಡಾರಗಳು ಇಬ್ಬರಿಗೂ ಗೊತ್ತಿದ್ದವು. ಅದರಿಂದ ಸುಕುಮಾರಿಯು ಆಗ ಆ ದಾರಿಯಲ್ಲಿ ಶಿತಿಕಂಠನೊಡನೆ ಮಾತಾಡದೆ

ಸಂಜೆಯು ಮುಂದೆ ಆವೋರ್ಗವ್‌ನ ಮನೆಗೆ ಹೋದಳು.

ಆವೋರ್ಗವ್‌ನು ಶಿತಿಕಂಠನಿಗಿಂತಲೂ ವಯಸ್ಸಿನಿಂದ ದೊಡ್ಡವನು. ಇವನಾದರೂ ಘಾತುಕತನದಲ್ಲಿ ಶಿತಿಕಂಠನ ಸಮಾನಸ್ಕಂಧನಾಗಿದ್ದರೂ, ಇತರ ಭಾಷೆಗಳ ಜ್ಞಾನ, ಧೂರ್ತತನ ಮುಂತಾದವುಗಳಲ್ಲಿ ಅವನನ್ನು ಸರಿಗಟ್ಟುವಂತಿರ ಲಿಲ್ಲ. ಆದರಿಂದ ಇವನು ತನಗಿಂತ ಚಿಕ್ಕ ವಯಸ್ಸಿನವನಾದ ಆ ಶಿತಿಕಂಠನ ಹಸ್ತಕನಾಗಿದ್ದನು. ಆವೋರ್ಗವ್‌ನಲ್ಲಿ ಯೋಜಕಶಕ್ತಿಯು ಕಡಿಮೆಯಿದ್ದರೂ, ಗೊತ್ತುಮಾಡಿಕೊಟ್ಟ ಕೆಲಸವನ್ನು ಬಹು ಸುಲಭವಾಗಿ ಕೊನೆಗಾಣಿಸುವದರಲ್ಲಿ ನಿಷ್ಣಾತನಾಗಿದ್ದನು. ಅಂತೇ ಅವನು ನಮ್ಮೂರಿಗೆ ಬಂದು, ನಮ್ಮೂರ ಚಾಣಾಕ್ಷರು ಬೆಟ್ಟುಕಚ್ಚುವ ಹಾಗೆ ಮೋಸ ಮಾಡಿ, ಆ ಮನೆಯ ಚಿನ್ನಮ್ಮನನ್ನು ಹೊತ್ತುಕೊಂಡು ಹೋಗಿ, ಆ ಊರಲ್ಲಿಟ್ಟು, ಅವಳನ್ನು ೫ ಸಾವಿರ ರೂಪಾಯಿ ಗಳಿಗೆ ಆ ತುರುಕನಿಗೆ ಮಾರಿದ್ದನು! ಆವೋರ್ಗವ್‌ನು ಘಾತುಕತನದಲ್ಲಿಯೇ ಜೀವಿಸುತ್ತಿದ್ದದರಿಂದ ಅವನ ಶೀಲವೇ ಅದಾಗಿ ಹೋಗಿತ್ತು. ಆದಿರಲಿ ತಾನಾಗಿ ಮನೆತನಕ ಹೋಗಿ ಮಾತಾಡಿಸಿದರೂ ಮಾತಾಡದಂತಹ ಸುಕುಮಾರಿಯು, ತನ್ನ ಮನೆಗೆ ಬಂದುದನ್ನು ನೋಡಿ ಆವೋರ್ಗವ್‌ನಿಗೆ ಆಶ್ಚರ್ಯಭರಿತ ಆನಂದ ವಾಯಿತು. ಅವನ ಆ ಸ್ಥಿತಿಯನ್ನು ಕಂಡು ಸುಕುಮಾರಿಯು ಒಂದೆರಡು ತೀಕ್ಷ್ಣ ನೇತ್ರಕಟಾಕ್ಷಗಳನ್ನು ಬೀರಿ ಅವನನ್ನು ಮತ್ತಿಷ್ಟು ಹಣ್ಣು ಮಾಡಿದಳು. ಕೂಡಲೆ ಅವನು ಆಯಾ ಎಂದು ಜೊಲ್ಲು ಸುರಿಯುವ ಮುಖದಿಂದ ಅವಳೊಡನೆ ಮಾತಾಡ ಬಂದನು. ಆಗ ಅವಳು ಅವನನ್ನು ಒತ್ತಟ್ಟಿಗೆ ಕರೆದು:—ನಿನ್ನ ಸಂಗಡಿಗನ್ಯಾರು? ಅವನು ನಿನ್ನೊಡನೆ ಈಗ ಯಾವ ಕೆಲಸದಲ್ಲಿ ತೊಡಗಿರುವನು? ಇತ್ಯಾದಿ ಸಂಗತಿಯನ್ನು ಕೇಳಿದಳು. ಆ ಕಮಿಳನು ಅವಳಿಗೆ ಒಮ್ಮೆಲೆ ಗುಟ್ಟು ಕೊಡದಾದನು. ಆಗಲವಳು ತನ್ನ ನೇತ್ರಕಟಾಕ್ಷಗಳನ್ನು ಬೀರುತ್ತ ಸಿಟ್ಟಿನ ಆವಿರ್ಭಾವವನ್ನು ತಾಳಿ ಅಲ್ಲಿಂದ ಹೊರಡಲು ಸಿದ್ಧಳಾಗಲು, ಅವನು ಅವಳನ್ನು ತಡೆದು, ಶಿತಿಕಂಠನ ಗುಹ್ಯವನ್ನೆಲ್ಲ ಅವಳಿಗೆ ತಿಳಿಸಿ, ಅವಳ ಪ್ರೇಮಯಾಚನೆ ಮಾಡಿದನು. "ನನ್ನ ಒಂದು ಮಹತ್ವದ ಕೆಲಸವು ಇನ್ನು ಒಂದೆರಡು ದಿನಗಳಲ್ಲಿ ಆಗತಕ್ಕದ್ದಿದೆ. ಅದಕ್ಕೆ ನಿನ್ನ ನೆರವು ಅವಶ್ಯವಾಗಿದೆ. ನೀನು ನನಗೆ ಆ ಕೆಲಸದಲ್ಲಿ ಮನಮುಟ್ಟಿ ಸಹಾಯ ಮಾಡಿದುದೇ ಆದರೆ, ನಾನು ನಿನ್ನವಳಾಗುವೆನು; ಆ ವರೆಗೆ ನೀನು ನನ್ನ ಮೈ-ಕೈ ಮುಟ್ಟಲಾಗದೆಂ"ದು ಹೇಳಿ, ಕೋಲು ಮಿಂಚಿನಂತೆ ಮಿಣಿದು ಸುಕುಮಾರಿಯು ಅಲ್ಲಿಂದ ಹೊರಟುಹೋದಳು.

ಶಿತಿಕಂಠನು ಶ್ರೀಕಂಠನ ಕಾಗದ-ಪತ್ರಗಳನ್ನು ಎತ್ತಿಹಾಕಿ ಎಂಕ್ಯಾಮಾವನನ್ನು ಕೊಂದು, ತಾನೇ ಶ್ರೀಕಂಠನೆಂದು ಘೋಷಣೆ ಮಾಡಿ, ಎಂಕ್ಯಾ

ಮಾವನ ಎಲ್ಲ ಆಸ್ತಿಯನ್ನು ನೆಗವಲು ಮಾಡಿದ ಬೇಕನ್ನೂ, ಶ್ರೀಕಂಠನು ಸುಶೀಲೆಯ ಸಹಾಯದಿಂದ ಶಿತಿಕಂಠನ ಪೆಟ್ಟಿಗೆಯೊಳಗಿನ ಆ ಮಹತ್ವದ ಕಾಗದ-ಪತ್ರಗಳ ಪುಡಿಕೆಯನ್ನು ತಕ್ಕೊಂಡು ಅವಳೊಡನೆ ಅವನ್ನು ಬೆಂಗಳೂರಿಗೆ ಕಳಿಸಿದುದನ್ನೂ, ಆಕೆಯ ಪತ್ರ ತಿಳಿದು ಶಿತಿಕಂಠನು ಇಂದೇ ರಾತ್ರಿ ಬರಬೇಕೆಂದು ಅವಳಿಗೆ ತಾರುಮಾಡಿದ್ದನ್ನೂ, ಅವಳು ಆ ಮಹತ್ವದ ಕಾಗದ-ಪತ್ರಗಳೊಡನೆ ಇಂದು ರಾತ್ರಿಯ ಶಟಲ್ಲಿಗೆ ಬೆಂಗಳೂರಿಂದ ಬರುವಳೆಂಬುದನ್ನೂ ಸುಕುಮಾರಿಯು ಅರ್ಮೊಗಮ್‌ನಿಂದ ತಿಳಕೊಂಡಳು. ಅಂದೇ ರಾತ್ರಿ ಮೈಸೂರಿಂದ ೯ಕ್ಕೆ ಹೊರಡುವ ಶಟಲ್ಲುಗಾಡಿಯಿಂದ ಮದ್ದೂರಿಗೆ ಹೋಗಿ, ಅಲ್ಲಿಂದ ಮೈಸೂರಿಗೆ ಬರುವ ಗಾಡಿಯೊಳಗಿನ ಸುಶೀಲೆಯ ಡಬ್ಬಿಯನ್ನೇರಿ ಆಕೆಗೇನೇನೋ ಸುಳ್ಳು ಹೇಳಿ, ತನ್ನ ಗಂಟನ್ನು ಹುಡುಕುವ ಸಲುವಾಗಿ ಅವಳನ್ನು ಕೆಳಗೆ ಕಳಿಸಿ, ಆಕೆಯ ಕೈ ಪೆಟ್ಟಿಗೆಯೊಳಗಿನ ಆ ಮಹತ್ವದ ಕಾಗದ-ಪತ್ರಗಳನ್ನು ಎತ್ತಿಹಾಕಿಕೊಂಡು ಮೈ-ಸೂರಿಗೆ ಬಂದವಳು ಮತ್ತಾವ ಹೊಯ್ಮಾಲೆಯೂ ಆಗಿರದೆ, ಶಿತಿಕಂಠನ ಕಡು ವೈರಿಯಾದ ಆ ಸುಕುಮಾರಿಯೇ ಆಗಿದ್ದಳು!

---

## ೭ನೇ ಮೆಟ್ಟಲು—ಸುಕುಮಾರಿಯ ಸಾಹಸ.

ಶಿತಿಕಂಠನು ಸುಶೀಲೆಯನ್ನು ಆ ಕೋಣೆಯಲ್ಲಿ ಕೂಡಹಾಕಿ, ಅರ್ಮೊಗಮ್‌ನ ಕಿವಿಯಲ್ಲಿ ಏನೇನೋ ಹೇಳಿ, ದಾರಿ ಹಿಡಿದು ಸಾಗಿರಲು, ದೂರದಲ್ಲಿ ಅವನಿಗೆ ಸುಕುಮಾರಿಯಂಥ ಒಬ್ಬ ಸ್ತ್ರೀಯು ಕಾಣಿಸಿಕೊಂಡಳು. ಆಕೆಯು ಸುಕುಮಾರಿಯೇ ಆಗಿದ್ದರೂ, ಅವಳಿಗೆ ಈಗ ಶಿತಿಕಂಠನ ಭೆಟ್ಟಿಯು ಅವಶ್ಯಕತೆಯಿರಲಿಲ್ಲ; ಅರ್ಮೊಗಮ್‌ನನ್ನು ಕಾಣುವ ಜರೂರಿಯಿತ್ತು. ಆದರಿಂದ ಅವಳು ತಾನಾಗಿಯೇ ಅವನ ಮೋರೆ ತಪ್ಪಿಸಿ, ಸಮೀಪದಲ್ಲಿಯ ಒಂದು ಹಾಳುಮನೆಯನ್ನು ಹೊಕ್ಕಳು. ಆಕೆಯು ಸುಕುಮಾರಿಯಾಗಿರದೆ ತನಗೆ ಕೇವಲ ಹಾಗೆ ಭಾಸವಾಯಿತೆಂದು ಬಗೆದು ಶಿತಿಕಂಠನು ಹೊರಟು ಹೋದನು.

ಕೆಲ ನಿಮಿಷಗಳ ನಂತರ ಶಿತಿಕಂಠನು ಹೊರಟು ಹೋದನೆಂಬುದನ್ನು ಖಾತ್ರಿ ಮಾಡಿಕೊಂಡು ಸುಕುಮಾರಿಯು ಆ ಹಾಳುಮನೆಯಿಂದ ಹೊರಬಿದ್ದಳು. ಆಕೆಗೆ ಅಂದು ಅನುಕೂಲ ಗ್ರಹಗಳ ಯೋಗವಿತ್ತೋ ಏನೋ, ಅವಳು ಅಲ್ಲಿಂದ ಹೊರಬೀಳಲಿಕ್ಕೂ ಅರ್ಮೊಗಮ್‌ನು ಅಲ್ಲಿಗೆ ಬರಲಿಕ್ಕೂ ಗಂಟೇಬಿತ್ತು. ಮೈ-ಸೂರಿಂದ ಬಹು ದೂರದಲ್ಲಿಯ ಈ ಅರಣ್ಯಪ್ರದೇಶದಲ್ಲಿ ಇವಳೇಕೆ ಬಂದಿರಬಹುದೆಂದು ಅವನಿಗೆ ಗೂಢವೇ ಬಿತ್ತು. ಅಷ್ಟರಲ್ಲಿ ಒಂದು ವಕ್ರಕಟಾಕ್ಷವನ್ನು

ಎನೆದು, ಸುಕುಮಾರಿಯು ಮುರುಕದಿಂದ:—ಸವಾರಿಯು ಇತ್ತಿತ್ತ ನಡೆದಿತ್ತೆ? ನನ್ನ ಭೇಟಿಯಿಂದ ಸವಾರಿಯ ಕೆಲಸಕ್ಕೆ ವಿಘ್ನವುಂಟಾಗಲಾರದಷ್ಟೇ? ಎಂದವಳೇ ಮತ್ತೆ ಆ ಹಾಳು ಮನೆಯನ್ನು ಪ್ರವೇಶಿಸಿದಳು ಆಕೆಯು ಆ ಮನೆಯಲ್ಲಿ ಹೊಕ್ಕ ಕೂಡಲೆ ತನ್ನ ಬಯಕೆಗಳನ್ನು ಪೂರಯಿಸುವದಕ್ಕಾಗಿಯೇ ಬಂದಿರುವಳೆಂದು ತಿಳಿದು, ಆ ಮೂರ್ಖನು ಅವಳ ಹಿಂದಿಂದೆ ಆ ಮನೆಯಲ್ಲಿ ಹೋದನು ಸುಕು ಮಾರಿಗೆ ಆಮೋಗವ್ಯನ ಸಹವಾಸದ ಅವಶ್ಯಕತೆಯಿರಲಿಲ್ಲ; ಆದರೆ ತನ್ನ ಉದ್ದಿಷ್ಟಕಾರ್ಯಸಾಧನಕ್ಕಾಗಿ ಅವಳು ಅವನನ್ನು ತನ್ನ ಹಿಡತದಲ್ಲಿ ತರಲಿಕ್ಕೆ ಹೀಗೆ ಮಾಡುತ್ತಿದ್ದಳು. ಒಳಗೆ ಹೊಕ್ಕವನೇ ಆಮೋಗವ್ಯನು ಅವಳ ಗದ್ದ ವನ್ನು ಹಿಡಿದು:—ಯಾಕೆ, ಇಷ್ಟು ಹೊರೇಕೆ ಬಂದೆ? ಎಂದು ಮಾಡಿದ ಪ್ರಶ್ನೆಗೆ ಸುಕುಮಾರಿಯು ಡಾಂಭಿಕಸ್ಥಿತಿಯಿಂದ—ಸರಿ ದೂರಕ್ಕೆ! ಪರಸ್ತ್ರೀಯನ್ನು ಮುಟ್ಟ ಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೇ? ಎಂದೆಂದು ಮುರುಕದಿಂದ ತುಸ ಹಿಂದೆ ಸರಿದಳು. “ಲಾವಣ್ಯ ಸೌಂದರ್ಯ ತಾರುಣ್ಯ ನಾರೀ | ಚಾತುರ್ಯತಾ ಚಂಚಲ ಚಿತ್ತಹಾರೀ || ಪರಾಂತಕಾಳೀ ಪಥತಾ ಸಮಂಧೂ | ಅಭಿಲಾಷ ನ ಕರಿ ತೋ ಧನ್ಯ ಸಾಧು” || ಎಂಬ ನುಡಿಯನ್ನು ಶ್ರೀ ಸಮರ್ಥ ರಾಮದಾಸ ಸ್ವಾಮಿಗಳೇ ನುಡಿದಿರುವಾಗ, ಅಂಥ ಪ್ರಸಂಗಪ್ರೊದಗಿದಾಗ ಆಮೋಗವ್ಯನಂಥ ಪರಮ ವಿಷಯಲಂಪಟನ ಪಾಡೇನು?

ಅವನು ಅವಳ ಕೈ-ಕಾಲು ಬಿದ್ದು ಹೇಳಿಕೊಂಡನು, ನೀನು ಕೇಳಿದ್ದು ಕೊಡುವೆನೆಂದನು, ಹೇಳಿದ್ದು ಕೇಳುವೆನೆಂದನು; ಮತ್ತೆ ಏನೇನೋ ಬಾಯಿಗೆ ಬಂದಂತೆ ಒಡನುಡಿದು ಅವಳ ಪ್ರೇಮಯಾಚನೆ ಮಾಡತೊಡಗಿದನು. ತನ್ನ ಇಂದಿನ ಕಾರ್ಯಸಾಧನೆಗೆ ತಕ್ಕ ಪ್ರಸಂಗಪ್ರೊದಗಿತೆಂಬದು ಮನವರಿಕೆಯಾ ಗುವ ವರೆಗೂ ಸುಕುಮಾರಿಯು ಅವನೆದುರಿಗೆ ಒಂದು ತುಟಿ ಎರಡು ಮಾಡಲಿಲ್ಲ. ಆ ಆಸಾಮಿಯು ತೀರ ಹಣ್ಣಿಗೆ ಬಂದ ಬಳಿಕ ಅವಳು ಒಮ್ಮೆ ಮೆಲ್ಲನೆ ಅವನ ಮೋರೆಯ ಮೇಲೆ ಕೈಯಿಳಿದು:—ನೀನು ನನ್ನ ಕೆಲಸ ಮಾಡಿಕೊಡುವೆನೆಂದು ಈಗ ವಚನ ಕೊಡು; ಅಂದರೆ ಇಂದು ನಾನು ನಿನ್ನನ್ನು ನನ್ನ ಮನೆಗೆ ಬರಗೊ ಡುತ್ತೇನೆ, ಎಂದು ಅನ್ನಲು, ಹಾಗೇ ಆಯಿತೆಂದು ಆ ತಮಿಳನು ಅವಳ ಕೈ ಮೇಲೆ ಕೈಹಾಕಿ ವಚನ ಕೊಟ್ಟನು.

ಬಳಿಕ ಸುಕುಮಾರಿಯು:—ನಾನೂ ನೀವೂ ಹೀಗೆ ಕದ್ದು-ಮುಚ್ಚಿ ವ್ಯವ ಹರಿಸುವದು ನನಗೆ ಸೇರುವದಿಲ್ಲ. ಸದಾ ನಿಮ್ಮ ಸಹವಾಸದಲ್ಲಿಯೇ ಇರಬೇ ಕೆಂದು ನನ್ನ ಬಯಕೆಯಾಗಿದೆ. ಅದನ್ನು ಕೊನೆಗಾಣಿಸಬಹುದೇ? ಎಂದು ಅನ್ನಲು,

''ನನಗೂ ಈ ಶಿತಿಕಂಠನ ಕಾಟವು ಸಾಕಾಗಿದೆ. ಇಂದು-ನಾಳೆ ಅವನ ಕೆಲಸವು ಅವನಂತಾಗುವದು ಖಂಡಿತ. ಆದಾದ ಕೂಡಲೆ ಅವನಿಂದ ನನಗೆ ಏನಿಲ್ಲೆಂದರೂ ೧೦-೨೦ ಸಾವಿರ ರೂಪಾಯಿಗಳು ಸಿಗುವವು. ಆ ಬಳಿಕ ನಾನು ನಿನ್ನವನೇ ಆಗಿ, ನಿನ್ನೊಡನೆ ಸುಖದಿಂದಿರುವೆನು,'' ಎಂದು ನುಡಿದ ಆ ಕುಟಿಳನ ಮಾತಿಗೆ ಸುಕುಮಾರಿಯು:—''ಇಷ್ಟು ಬೇಗ ಅವನ ಆ ಕೆಲಸವು ತೀರುವ ಬಗೆ ಹೇಗೆ?'' ಎಂದು ಪ್ರಶ್ನೆಮಾಡಿದಳು.

ಆಗ ಅಮೋಘವರ್ಷನು ''ಶಿತಿಕಂಠನ ಅಪ್ಪಣೆಯ ಮೇರೆಗೆ ತಾನು ಇಂದು ಸುಶೀಲೆಯನ್ನು ಕರೆತಂದು, ಆ ಹಾಳು ಮೇಲಂಕಸ್ತಿನ ಮನೆಯಲ್ಲಿಟ್ಟದ್ದನ್ನೂ, ಇಂದು ಸಾಯಂಕಾಲದೊಳಗಾಗಿ ಶ್ರೀಕಂಠನನ್ನು ಕೊಲ್ಲುವದನ್ನೂ, ಕಾಗದ-ಪತ್ರಗಳ ಮುಖಾಂತರ ಶಿತಿಕಂಠನು ಶ್ರೀಕಂಠನಾಗಿ ಎಂಕ್ಯಾಮಾವನ ಆಸ್ತಿಯನ್ನು ಎತ್ತಿಹಾಕಿ ಸುಶೀಲೆಯನ್ನು ಭ್ರಷ್ಟಗೊಳಿಸುವದನ್ನೂ' ಅವಳಿಗೆ ಹೇಳಿದನು.

''ನನಗೀಗ ಮತ್ತೊಂದು ಬಯಕೆಯುಂಟಾಯಿತು. ನಿಮ್ಮ ಹೊರತು ನನ್ನ ಆ ಬಯಕೆಯನ್ನು ಪೂರೈಸುವವರಾರು?''

''ಸುಕುಮಾರೀ, ಅದೇನು ಹೇಳು. ಈಗಲೆ ಪೂರಯಿಸುವೆನು.''

''ಯಾವ ಹುಡ-ಗಿಯನ್ನು ನಿಮ್ಮ ಧಣಿಯು ಭ್ರಷ್ಟಗೊಳಿಸಬೇಕೆಂದಿರುವನೋ, ಅವಳನ್ನು ನಾನು ಕಣ್ಣಾರೆ ನೋಡಬೇಕೆಂದಿದ್ದೇನೆ. ಯಾಕಂದರೆ, ಅವಳು ರೂಪ-ಲಾವಣ್ಯಗಳಿಂದ ಯುಕ್ತಳಾಗಿದ್ದರೆ, ನಾನು ಅವಳನ್ನು ಒಬ್ಬ ಸಾಹುಕಾರನಿಗೆ ಮಾರಿ, ಬಂದ ಹಣದಲ್ಲಿ ನಿಮಗೂ ಕೆಲವು ಕೊಡುವೆನು.''

''ಭಲೆ-ಭಲೆ! ಇದೊಳ್ಳೇ ವ್ಯಾಪಾರವು ನಡೆ ಹಾಗಾದರೆ, ನಾನು ನಿನಗವಳನ್ನು ತೋರಿಸುತ್ತೇನೆ; ಆದರೆ ಸುಕುಮಾರೀ, ಆಕೆಗೆ ನಮ್ಮ ಇಂಗಿತವನ್ನು ಮಾತ್ರ ತಿಳಿಸಬೇಡ ಕಂಡಿಯಾ?'' ಎಂದಂದು ಅವನು ಸುಕುಮಾರಿಯ ಹೆಗಲ ಮೇಲೆ ಕೈಯಿಟ್ಟು, ಅವಳನ್ನು ಸಮೀಪದಲ್ಲಿಯ ಆ ಹಾಳು ಮಹಡಿಯ ಮನೆಗೆ ಕರೆದೊಯ್ದು ಅಟ್ಟವನ್ನೇರಿದನು. ಅಷ್ಟರಲ್ಲಿ ಅವನಿಗೆ ಏನು ನೆನಪಾಯಿತೋ ಯಾರು ಬಲ್ಲರು? ಅವನು:—''ಸುಕುಮಾರೀ, ಇಗೋ ಅವಳು ಈ ಕೋಣೆಯಲ್ಲಿರುವಳು. ನೀನು ಈ ಕೀಲಿಯ ಕೈಯಿಂದ ಕೀಲಿ ತೆಗೆದು ಅವಳನ್ನು ನೋಡಿ, ಕೀಲಿ ಹಾಕಿಕೊಂಡು ಬೇಗನೆ ಬಾ. ನಾನು ಕೆಳಗಿದ್ದು, ಆ ಶಿತಿಕಂಠನು ಮರಳಿ ಬರುವನೋ ಏನೋ ಎಂಬದನ್ನು ನೋಡುತ್ತಿರುತ್ತೇನೆ. ಅವನು ಮಹಾ ಸಂಶಯಮನಸ್ಕನಾದುದರಿಂದ ಯಾವಾಗ ಎಲ್ಲಿಗೆ ಬರ-ಹೋಗುವನೆಂಬದು ಗೊತ್ತಾಗದು'' ಎಂದು ಹೇಳಿ ಕೆಳಗೆ ಹೋದನು.

ಕೋಣೆಯ ಬಾಗಿಲ ತೆರೆದ ಸಪ್ಪಳವು ಕಿವಿಗೆ ಬಿದ್ದ ಕೂಡಲೆ ಸುಶೀಲೆಯು

ಹೃದಯವು ಧಡ ಧಡ ಹಾರಹತ್ತಿತು. ಆ ಘಾತುಕಶಿತಿಕಂಠನು ಪುನಃ ತನ್ನನ್ನು ಗೋಳಾಡಿಸಲಿಕ್ಕೆ ಬಂದನೆಂದೇ ಅವಳ ಮನವರಿಕೆಯಾಯಿತು. ಅದರಿಂದ ಅವಳು ಭಯಚಕಿತದೃಷ್ಟಿಯಿಂದ ಬಾಗಿಲ ಕಡೆಗೆ ನೋಡುತ್ತಿರಲು, ಒಬ್ಬ ಹೆಣ್ಣು ಮಗಳು ಒಳಗೆ ಬಂದಳು. ಇದೇನು ಗೂಢವೆಂಬದು ತಿಳಿಯದೆ, ಅವಳು ಆ ಆಗಂತುಕಳನ್ನು ಕುರಿತು:—ನೀವು ಯಾರು? ಎಂದು ಕೇಳಿದಳು.

ಸುಕುಮಾರಿಯು ಅವಳನ್ನು ಹೆಚ್ಚು ಮಾತಾಡಗೊಡದೆ:—ಸುಮ್ಮನೆ ನನ್ನ ಬೆನ್ನ ಹಿಂದೆ ಬಾ, ಎಂದಳು. ಆಗ ಸುಶೀಲೆಗೆ ನಿನ್ನೆ ರಾತ್ರಿ ತನ್ನನ್ನು ತಕ್ಕಿಸಿ, ತನ್ನ ಕೈಪೆಟ್ಟಿಗೆಯಿಂದ ಕಾಗದ-ಪತ್ರಗಳನ್ನು ಎತ್ತಿ ಹಾಕಿದ ಹೊಯ್ಮಾಲೆಯಾದ ಹೆಂಗಸು ಇವಳೇ ಎಂಬದು ಮನವರಿಕೆಯಾಗಲು, ಅವಳು:— ನಿನ್ನಲ್ಲಿ ಒಮ್ಮೆ ವಿಶ್ವಾಸವಿಟ್ಟದ್ದರಿಂದಲೇ............

"ನನ್ನ ಮೇಲೆ ವಿಶ್ವಾಸವಿಟ್ಟು ನೀನೇನೂ ಕೆಟ್ಟಿಲ್ಲ. ಹೆರವರನ್ನೂ ಕೆಡಿಸಿಲ್ಲ. ವಿಶ್ವಾಸವಿಡದಿದ್ದರೆ ಮಾತ್ರ, ನಿನ್ನ ಹಾಗು ನಿನ್ನವರ ಘಾತಮಾಡಿಕೊಳ್ಳುತ್ತಿದ್ದೆ. ನಾನು ನಿನ್ನ ಕಾಗದ-ಪತ್ರಗಳನ್ನು ಕದ್ದದ್ದು ನಿಜ; ಇಲ್ಲಿ ಆ ಬಗ್ಗೆ ಹೆಚ್ಚು ಮಾತಾಡುತ್ತ ಕೂಡ್ರಲು ಅವಕಾಶವಿಲ್ಲ. ಇದರಿಂದಲೇ ನಿನ್ನನ್ನು ಇಲ್ಲಿಂದ ಮುಕ್ತಮಾಡಿಕೊಂಡೊಯ್ಯಲಿಕ್ಕೆ ಬಂದಿದ್ದೇನೆ. ನಾನೂ ನಿನ್ನಂತೆಯೇ ಆ ಘಾತುಕನಿಂದ ಮೋಸಗೊಳಿಸಲ್ಪಟ್ಟ ಸ್ತ್ರೀಯಾಗಿರುತ್ತೇನೆ"

"ಆದರೆ ನೀನು ನನ್ನನ್ನು ಕರೆದೊಯ್ಯುವದೆಲ್ಲಿಗೆ?" ಎಂದು ಸಾಶಂಕ ಮುದ್ರೆಯಿಂದ ಸುಶೀಲೆಯು ಪ್ರಶ್ನೆ ಮಾಡಲು,

"ಮೊದಲು ಈ ಸೆರೆಮನೆಯಿಂದಂತೂ ಹೊರಬೀಳು. ಹೊರಗೆ ಹೋದ ಬಳಿಕ ಅದೆಲ್ಲವನ್ನೂ ನಿವೇದಿಸುವೆನು. ನನ್ನಲ್ಲಿ ಪೂರ್ಣ ವಿಶ್ವಾಸವಿಡು. ನಿನ್ನ ಕಾಗದ-ಪತ್ರಗಳನ್ನು ಎತ್ತಿ ಹಾಕಿದ ನನ್ನ ಉದ್ದೇಶವಾದರೂ ಸದ್ಧೇತುಪೂರ್ಣವಾದದ್ದೇ ಎಂಬದು ನಿನಗೆ ಆ ಮೇಲೆ ತಿಳಿಯದಿರದು."

ಈ ಆಗಂತುಕ ಹೆಂಗಸಿನ ಮೇಲೆ ಮತ್ತೆ ವಿಶ್ವಾಸಡಬೇಕೋ, ಇಡಬಾರದೋ ಎಂಬ ಬಗ್ಗೆ ವಿಚಾರ ಮಾಡುತ್ತ ಸುಶೀಲೆಯು ನಿಂತಿರಲು, ಸುಕುಮಾರಿಯು ಅವಳ ಕೈ ಹಿಡಿದು:—ಇನ್ನು ನನ್ನನ್ನು ಮೋಸಗಾರ್ತಿಯೆಂದು ತಿಳಿಯಬೇಡ. ನಾನು ನಿನ್ನ ಸಹೋದರಿಯೆಂದು ತಿಳಿದು, ನಾನು ಕರೆದತ್ತ ಸುಮ್ಮನೆ ಬಾ, ಎಂದಂದು ಅವಳನ್ನು ಆ ಕೋಣೆಯ ಹೊರಗೆ ಕರೆತಂದು, ಅಟ್ಟದ ಬಾಗಿಲ ಮರೆಗೆ ನಿಲ್ಲಿಸಿ:— ಈಗ ಕೆಳಗಿನಿಂದ ಒಬ್ಬನು ಬರುವನು. ಅವನು ಒಳಗೆ ಬಂದ ಕೂಡಲೆ ಸ್ವಲ್ಪವೂ ಕಾಲಸಪ್ಪಳ ಮಾಡದಂತೆ ಕೆಳಗಿಳಿದು ನಡೆ. ನಾನೂ ನಿನ್ನ ಬೆನ್ನ ಹಿಂದೆಯೇ ಬರುವೆನು. ಕೆಳಗೆ ಹೋದ ಬಳಿಕ ಮುಂದೇನು

ಪ್ರಾಣಬೇಕೆಂಬುದನ್ನು ತಿಳಿಸುವೆನು, ಎಂದಳು.

ಸುಶೀಲೆಯು ಸರಿಯಾಗಿ ನಿಂತುಕೊಂಡಳೆಂಬುದನ್ನು ಖಾತ್ರಿಮಾಡಿಕೊಂಡ ಬಳಿಕ, ಸುಕುಮಾರಿಯು ಗಟ್ಟಿದನಿಯಿಂದ:—ಗೆಳೆಯಾ-ಗೆಳೆಯಾ, ಇತ್ತ ಬೇಗ ಬಾ, ಎಂದು ಒದರಿದಳು. ಕೂಡಲೆ ಆವೆರ್ಗಸ್‌ನು ಧಾವಿಸುತ್ತ ಆ ಕೋಣೆಯ ಹತ್ತಿರ ಬಂದನು. ಅವನು ತನ್ನ ಹತ್ತಿರ ಬರಲು, ಸುಕುಮಾರಿಯು ಅವನನ್ನುದ್ದೇಶಿಸಿ:—ಈ ಕೋಣೆಯೊಳಗೆ ಬಾಗಿಲ ಹಿಂದೆ ಎಷ್ಟು ರೂಪಾಯಿಗಳನ್ನಾರು ಚಲ್ಲಿರುವರು? ಎಂದು ಕೇಳಿದಳು. ಕೂಡಲೆ ಆ ಆಶೋತ್ತರ ಪ್ರಾಣಿಯು ಒಳಗೆ ಹೋಗಲು, ಸುಕುಮಾರಿಯು ಬಾಗಿಲವನ್ನಿಕ್ಕಿ ಚಿಲಕ ಹಾಕಿ ಕೀಲಿ ಜಡೆದು ಕೆಳಗೆ ಓಡುತ್ತ ಬಂದಳು. ಅಷ್ಟರಲ್ಲಿ ಸುಶೀಲೆಯೂ, ತಲೆಬಾಗಿಲ ಹತ್ತಿರ ಬಂದು ನಿಂತಿದ್ದಳು. ಅವರೀರ್ವರೂ ಹೊರಹೊರಟು, ಎಲ್ಲಿಗೆ ಹೋಗಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿ ಅದೇ ದಾರಿಯಿಂದ ಒಂದು ಬರೇ ಮೋಟಾರುಟ್ಯಾಕ್ಸಿಯು ಭರದಿಂದ ಸಾಗಿತ್ತು. ಸುಕುಮಾರಿಯು ಕೈಮಾಡಿ ಅದನ್ನು ನಿಲ್ಲಿಸಿ ಇಬ್ಬರೂ ಹತ್ತಿ, 'ಹಳೇಇಟ್ಟಿಗೆಗೂಡು' ಎಂದು ಡ್ರಾಯ್ವರನಿಗೆ ತಿಳಿಸಲು, ಅವನು ಅದನ್ನು ಅತ್ತ ಭರದಿಂದ ಬಿಟ್ಟನು. ಇತ್ತ ಆ ಮೇಲಂತಸ್ತಿನ ಮೇಲಿನ ಕೋಣೆಯೊಳಗೆ ಸೆರೆಸಿಕ್ಕ ಆವೆರ್ಗಸ್‌ನು ಸುಕುಮಾರಿಯ ಮೇಲೆ ಹಲ್ಲು ಕಡಿಯುತ್ತ ಅಲ್ಲಿಂದ ಹೊರಹೊರಡಲು ಉಪಾಯಗಾಣದೆ ಕುಳಿತುಕೊಂಡನು.

† † † †

ಮನೆಗೆ ಬಂದಬಳಿಕ ಸುಕುಮಾರಿಯು ಸುಶೀಲೆಗೆ ತನ್ನ ಕರ್ಮಕಥೆಯನ್ನು ವಿಶದವಾಗಿ ತಿಳಿಸಿದಳು. ಆ ಘಾತುಕನನ್ನು ನಂಬಿ ನಾನು ಕೆಟ್ಟೆನು. ನಾನು ಕೆಟ್ಟರೂ, ಮುಂದಿಯನ್ನು ಕೆಡಿಸುವವಳು ನಾನಲ್ಲ. ನನ್ನನ್ನು ಅಡ್ಡದಾರಿಗೆ ಹಚ್ಚಿದ ಆ ನೀಚನನ್ನು ಕೊನೆಗಾಣಿಸಿದ ನಂತರ, ನಾನು ಜೀವಂತ ಪ್ರಾಯಶ್ಚಿತ್ತ ತಕ್ಕೊಳ್ಳುತ್ತೇನೆಂದು ಅವಳು ಸುಶೀಲೆಗೆ ತಿಳಿಸಿದಳು.

* * * * * * * * * *

ಸುಶೀಲೆಯನ್ನು ಬೆಂಗಳೂರಿಗೆ ಕಳಿಸಿಕೊಟ್ಟ ಮರುದಿನ ಮಧ್ಯಾಹ್ನ ೪ ಗಂಟೆಗೆ ಶ್ರೀಕಂಠನು ಅವಳ ಹೆಸರಿಗೆ ಬೆಂಗಳೂರಿಗೆ ತಾರು ಮಾಡಿ, ಹೊರಟು ಬರಲು ತಿಳಿಸಿದನು; ಆದರೆ ಅವಳು ಆ ಕಾಲಕ್ಕೆ ಆ ಮನೆಯವಳೊಡನೆ ಬೆಂಗಳೂರೊಳಗಿನ ಶಂಕರಮಠ ಮುಂತಾದವುಗಳನ್ನು ನೋಡಲಿಕ್ಕೆ ಹೋಗಿದ್ದುದರಿಂದ

ತಾರಿನ ಶಿಪಾಯಿಯು ಮನೆಗೆ ಬಂದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಅದರಿಂದ ಅದು ಮಾಲಕರ ಪತ್ತೆಯಾಗಲಿಲ್ಲೆಂದು ವಾಪಸು ಹೋಯಿತು. ಮರುದಿನ ಬೆಳಿಗ್ಗೆ ಶ್ರೀಕಂಠನು ಚಾಮರಾಜಪುರ ಸ್ಟೇಶನ್ನಿಗೆ ಬಂದಿದ್ದನು; ಆದರೆ ಆ ರೈಲಿನಲ್ಲಿ ಸುಶೀಲೆಯೇ ಬಂದಿರಲಿಲ್ಲ. ಅದರಿಂದ ಅವನಿಗೆ ತುಂಬಾ ಆಲೋಚನೆಯುಂಟಾಯಿತು. ಅವನು ಮನೆಗೆ ಬಂದು ಆ ಬಗ್ಗೆ ಆಲೋಚಿತ್ತ ಕುಳಿತಿರಲು, ಬೆಂಗಳೂರಿಗೆ ಕಳಿಸಿದ ಅವನ ತಾರು "ಮಾಲಕರ ಪತ್ತೆಯಿಲ್ಲ"ಎಂದು ವಾಪಸು ಬಂದಿತು. ಅದನ್ನು ನೋಡಿಯಂತೂ ಅವನು ದಿಗಿಲುಗೊಂಡನು. ಆಗ ಅವನು ಮತ್ತೆ ಬೆಂಗಳೂರ ಶಂಕರಪುರದೊಳಗಿನ ಸುಶೀಲೆಯು ಇಳಕೊಂಡಿದ್ದ ಮನೆಯವರ ಹೆಸರಿಗೆ ಜರೂರಿಯ ರಿಪ್ಲಾಯ ತಾರು ಕೊಟ್ಟು, ಸುಶೀಲೆಯನ್ನು ಬೇಗನೆ ಕಳಿಸಿ, ಉತ್ತರ ಕೊಂಡಿರೆಂದು ತಿಳಿಸಿದನು. ಮುಂದೆ ಒಂದೇ ತಾಸಿನಲ್ಲಿ ಅದರ ಉತ್ತರವು ಹೀಗೆ ಬಂದಿತು. "ನಿನ್ನೆ ನಿನ್ನಿನ ಸಾಯಂಕಾಲದ ೬ ಗಂಟೆಯ ತಂತಿಯ ಮೇರೆಗೆ ಸುಶೀಲೆಯು ನಿನ್ನೆ ರಾತ್ರಿಯ ರೈಲಿಗೇ ಮೈಸೂರಿಗೆ ತೆರಳಿದಳು." ಈ ಉತ್ತರವನ್ನು ನೋಡಿಯಂತೂ ಅವನು ದಿಙ್ಮೂಢನಾದನು.

---



## ಆನೇ ಮೆಟ್ಟಲು - ತನ್ನ ಕರ್ಮವು ತನಗೆ ಬಿಡದು!

ಹೀಗೆ ಶ್ರೀಕಂಠನು ಚಾಮರಾಜಪುರಸ್ಟೇಶನ್ನ ಬಳಿಯ ತನ್ನ ರೂಮಿನಲ್ಲಿ ವಿಚಾರಗ್ರಸ್ತನಾಗಿ ಕುಳಿತಿರಲು, ಶಿತಿಕಂಠನು ತನ್ನ ಮತ್ತೊಬ್ಬ ಹಸ್ತಕನಿಗೆ ಪೋಲೀಸ ಅಮಲ್‌ದಾರನ ಉಡುಪುಗಳನ್ನು ಹಾಕಿ ಅವನನ್ನು ಶ್ರೀಕಂಠನ ಬಳಿಗೆ ಕಳಿಸಿ, "ನಿನ್ನನ್ನು ಪೋಲೀಸ ಸಾಹೇಬರು ಕರೆಯುವರು, ಬಾ" ಎಂದು ಕರೆ ಕಳುಹಿದನು. ಕೂಡಲೇ ಶ್ರೀಕಂಠನು ಹೊರಟನು. ಕರೆಯಲು ಬಂದ ಮೋಟಾರೂ ಶಿತಿಕಂಠನದೇ ಅಂದಮೇಲೆ ಆ ಕರೆಯಬಂದವನು ಶ್ರೀಕಂಠನನ್ನು ಪೋಲೀಸಸಾಹೇಬನ ಬಂಗ್ಲೆಗೆ ಕರೆದೊಯ್ಯದೆ, ಶಿತಿಕಂಠನ ಅಪ್ಪಣೆಯ ಮೇರೆಗೆ ಬೇರೊಂದು ಕಡೆಯ ಹಾಳುಮನೆಯಲ್ಲಿ ಒಯ್ದು ಸೆರೆಯಿಟ್ಟನು. ಶ್ರೀಕಂಠನನ್ನು ಅವನ ಕೋಣೆಯಿಂದ ಹೊರಡಿಸಿದ ಬಳಿಕ ಅವನ ಕೋಣೆಯನ್ನೆಲ್ಲ ಹುಡುಕಿದರು. ಅಲ್ಲಿ ಶಿತಿಕಂಠನಿಗೆ ಬೇಕಾಗಿದ್ದ-ನಿನ್ನೆ ರಾತ್ರಿ ಸುಶೀಲೆಯ ಕೈಪೆಟ್ಟಿಗೆಯೊಳಗಿಂದ ಟ್ರೈಲಿನಲ್ಲಿ ಕಳವಾಗಿ ಹೋಗಿದ್ದ-ಕಾಗದ-ಪತ್ರಗಳನ್ನು ಶೋಧಿಸಿದನು. ಅವು ಅಲ್ಲೆಲ್ಲಿಯೂ ಸಿಗಲಿಲ್ಲ. ಆಗ ಹತಾಶನಾಗಿ ಎಂಕ್ಯಾಮಾವನ ಆಸ್ತಿಯನ್ನು ಎತ್ತಿಹಾಕುವ ಬಗ್ಗೆ ಶಿತಿಕಂಠನು ಆಲೋಚಿಸತೊಡಗಿದನು.

ಹಸ್ತಕರು ಶ್ರೀಕಂಠನನ್ನು ಆ ಕತ್ತಲಕೋಣೆಯಲ್ಲಿ ಹಾಕಿ ಹೋದನಂತರ ಕೆಲಹೊತ್ತಿನ ಮೇಲೆ ಶಿತಿಕಂಠನು ಅಲ್ಲಿಗೆ ಬಂದು, ತನ್ನ ಕೈಯೊಳಗಿನ ವಿದ್ಯುಲ್ಲತೆಯ ಬ್ಯಾಟರಿಯ ಪ್ರಕಾಶವನ್ನು ಅವನ ಮೇಲೆ ಕೆಡಹಿ:—ಯಾಕೆ ರಾಯರೆ, ಎಲ್ಲಿರುವಳು ನಿಮ್ಮ ಆ ಸುಶೀಲೆಯು? ಎಂದು ಗಹಗಹಿಸಿ ನಕ್ಕನು. ಶ್ರೀಕಂಠನು ಅವನಿಗೆ ಉತ್ತರವನ್ನೇ ಕೊಡದೆ, ಒಮ್ಮೆ ಅವನ ಕಡೆಗೆ ತಿರಸ್ಕಾರಪೂರ್ಣದೃಷ್ಟಿಯಿಂದ ನೋಡಿದನು ಮಾತ್ರ:—

ಇಟ್ಟಿಗೆಗೂಡಿಗೆ ಹೋಗಿದ್ದ ಸುಶೀಲೆ-ಸುಕುಮಾರಿಯರು ಅಲ್ಲಿ ಕೆಲಹೊತ್ತು ಇದ್ದು, ಊಟ ತೀರಿಸಿಕೊಂಡರು. ನಂತರ ಅವರೀರ್ವರೂ ಚಾಮರಾಜಪುರ ಸ್ಟೇಶನ್ ಬಳಿಯ ಶ್ರೀಕಂಠನ ಬಿಡಾರಕ್ಕೆ ಬಂದರು. ಅವನ ಆ ರೂಮಿನಲ್ಲಿ ಆಗ ಯಾರೂ ಇರಲಿಲ್ಲ; ಬೀಗ ಹಾಕಿತ್ತು. ಅವನು ಎಲ್ಲಿಗೆ ಹೋಗಿರಬಹುದೆಂಬದು ಅವರಿಗೆ ತಿಳಿಯಲೊಲ್ಲದು. ಸುಶೀಲೆಯೂ ಎಡಬಲದ ಮನೆಯವರನ್ನು ಕಂಡು, ಅವನ ವಿಷಯವಾಗಿ ಕೇಳಿದಳು. ಆಗ ಒಬ್ಬ ಪೋರನು ಓಡುತ್ತ ಬಂದು:—ಒಬ್ಬ ಪೋಲೀಸ ಅಮಲ್ದಾರನೊಡನೆ ಅವರು ಈಗ ಕೆಲ ನಿಮಿಷಗಳ ಪೂರ್ವದಲ್ಲಿ ಮೋಟಾರಿನಲ್ಲಿ ಕುಳಿತು ಹೋದರು, ಎಂದು ಹೇಳಿದನು. ಅದನ್ನು ಕೇಳಿ ಸುಶೀಲೆ-ಸುಕುಮಾರಿಯರು ಒಬ್ಬರ ಮುಖವನ್ನೊ

ಬ್ಬರು ನೋಡಹತ್ತಿದರು. ಇದರಲ್ಲೇನಾದರೂ ಮೋಸವಿರಬಹುದೆಂದು ಅವರಿಬ್ಬರಿಗೂ ಅನಿಸಿತು.

“ಶ್ರೀಕಂಠನನ್ನು ತಂದು ಸೆರೆಯಲ್ಲಿಟ್ಟು ಬಳಿಕ ಅವನೆದುರಿಗೆ ನಿನ್ನನ್ನು ಭ್ರಷ್ಟಗೊಳಿಸುವೆನೆ”ಂದು ಹೇಳಿದ್ದ ಶಿತಿಕಂಠನ ಮಾತು ಆಗ ಸುಶೀಲೆಗೆ ನೆನಪಾಗಲು:—ಅಕ್ಕಾ, ಸುಕುಮಾರೀ, ಆ ನೀಚನು ಅವರನ್ನು ಅದಕ್ಕಾಗಿಯೇ ಮೋಸದಿಂದ ಕರೆದೊಯ್ದಿರಬಹುದಾಗಿದೆ. ಇನ್ನು ತಡಮಾಡಿದರೆ ಆ ಘಾತುಕನು ಅವರ ಪ್ರಾಣಘಾತಮಾಡಲಿಕ್ಕೆ ಕೂಡ ಹಿಂಜರಿಯುತಕ್ಕವನಲ್ಲ, ಎಂದಳು.

“ಸುಶೀ, ಅವನು ಶ್ರೀಕಂಠನನ್ನು ಮೋಸ ಪಡಿಸಿರಲಿ-ಪಡಿಸದಿರಲಿ ನಾವಂತೂ ಈಗ ಪೋಲೀಸಚಾವಡಿಗೆ ಹೋಗಿ, ನಿನ್ನ ಸಮಸ್ತ ಸಂಗತಿಯನ್ನು ಅವರಿಗೆ ತಿಳಿಸಲಿಕ್ಕೇ ಬೇಕು. ಅದರಿಂದ ಮುಂದಿನ ಕೆಲಸಕ್ಕೆ ಅನುಕೂಲವಾದೀತು” ಎಂದೆನಲು ಸುಶೀಲೆಯೂ ಅದಕ್ಕೊಪ್ಪಿದಳು. ಕೂಡಲೆ ಅವರೀರ್ವರೂ ಸಮೀಪದ ಪೋಲೀಸಸ್ಟೇಶನ್ನಿಗೆ ತೆರಳಿದರು.

ಆಗ ಆ ಪೋಲೀಸಸ್ಟೇಶನ್ನಿನಲ್ಲಿ ಭೀಮರಾಯನೆಂಬ ಹೆಸರಿನ ಪೋಲೀಸ ಇನಸ್ಪೆಕ್ಟರನು ಡ್ಯೂಟಿಯ ಮೇಲಿದ್ದನು. ಎಂಕ್ಯಾಮಾವನ ಕೊಲೆಯಾದಾಗಿನಿಂದ ಇದೇ ಭೀಮರಾಯನೇ ಸುಶೀಲೆಯ ಬಳಿಗೆ ಆಗಾಗ್ಗೆ ಹೋಗಿ, ಆಕೆಯ ಕ್ಷೇಮಸಮಾಚಾರ ಕೇಳುತ್ತಿದ್ದುದರಿಂದ ಸುಶೀಲೆಗೆ ಅವನ ಗುರುತು ಚನ್ನಾಗಿ ಆಗಿತ್ತು. ಸುಶೀಲೆಯು ಇನ್ನೊಬ್ಬಳೊಡನೆ ತನ್ನ ಕಚೇರಿಗೆ ಬರಲು, ಅವನು ಇವಳನ್ನುದ್ದೇಶಿಸಿ:—ಬನ್ನಿರಿ, ಸುಶೀಲಾಬಾಯಿಯವರೇ, ಇತ್ತ ಯಾವ ಕಡೆಗೆ ಬಂದಿದ್ದಿರಿ ಬನ್ನಿರಿ, ಎಂದು ಆದರಪೂರ್ವಕವಾಗಿ ಬರಮಾಡಿಕೊಂಡು ಅವರೀರ್ವರಿಗೂ ಕೂಡ್ರಲಿಕ್ಕೆ ಕುರ್ಚೆ ಕೊಡಿಸಿದನು. ಬಳಿಕ ಅವರಿಬ್ಬರೂ ಹೋಗಿ ಕುರ್ಚೆಗಳ ಮೇಲೆ ಕುಳಿತರು. ನಂತರ ಸುಶೀಲೆಯು ಎಂಕ್ಯಾಮಾವನ ಕೊಲೆಯಾದ ಕ್ಷಣದಿಂದ ಈ ವರೆಗೆ ನಡೆದ ಸಮಸ್ತ ಸಂಗತಿಗಳನ್ನು ಭೀಮರಾಯನೆದುರಿಗೆ ಬಿಚ್ಚಿ ಹೇಳಿದಳು. ಆಕೆಯ ನಿವೇದನವು ಮುಗಿದ ಬಳಿಕ ಭೀಮರಾಯನು:-ಹಾಗಾದರೆ ಆ ಮಹತ್ವದ ಕಾಗದ-ಪತ್ರಗಳನ್ನು ತಂದಿರುವಿರಾ? ಎಂದು ಪ್ರಶ್ನೆ ಮಾಡಲು—

“ತಂದಿರುವೆವೆ”ಂದು ಇಬ್ಬರೂ ಉತ್ತರ ಕೊಟ್ಟು, ಆ ಕಾಗದ-ಪತ್ರಗಳ ಪುಡಿಕೆಯನ್ನು ಅವನೆದುರಿಗಿಟ್ಟರು. ಅವನ್ನು ಅವನು ಬಿಚ್ಚಿ ನೋಡಿ, “ನನಗೆ ಆ ನಾಮಧಾರಿ ಶ್ರೀಕಂಠನ ಬಗ್ಗೆ ಸಂಶಯ ಬಂದೇ ಬಂದಿತ್ತು; ಆದರೆ ಏನಾದರೂ ಆಧಾರವಿರದೆ, ಅವನ ವಿರುದ್ಧ ಏನು ಮಾಡಲಿಕ್ಕೂ ಶಕ್ಯವಿರಲಿಲ್ಲ. ಅದಿರಲಿ, ಈಗ ಶ್ರೀಕಂಠರಾಯರು ಎಲ್ಲಿರುತ್ತಾರೆ?”

“ನಾವು ಈಗ ಅವರ ರೂಮಿಗೆ ಹೋಗಿಯೇ ಬಂದೆವು; ಅವರು ಅಲ್ಲಿಲ್ಲ. ಅವರು ಒಬ್ಬ ಪೋಲೀಸ ಅಮಲ್ದಾರರೊಡನೆ ಮೋಟಾರಿನಲ್ಲಿ ಕುಳಿತು ಹೋದ ರಂತೆ. ಬಹುಶಃ ಆ ಘಾತುಕನೇ ಅವರನ್ನು ಮೋಸಗೊಳಿಸಿ ಒಯ್ದಿರಬಹುದು” ಎಂದು ಸುಕುಮಾರಿಯು ಹೇಳಲು,

“ಸುಕುಮಾರೀ, ಆ ಚಾಮುಂಡೀ ದೆಟ್ಟದಡಿಯು ಹೊರತು ಮತ್ತೆಲ್ಲಾದರೂ ಶಿತಿಕಂಠನ ಕಾರಸ್ಥಾನದ ಸ್ಥಳಗಳಿವೆಯೇನು?”

“ಅದು ನನಗೆ ತಿಳಿಯದು; ಆದರೆ ಅಲ್ಲಿ ಸೆರೆ ಸಿಕ್ಕಿರುವ ಆರ್ವೋಗಮ್‌ ನನ್ನು ಕಂಡು ಕೇಳಿದರೆ ತಿಳಿದೀತು” ಎಂಬ ಸುಕುಮಾರಿಯ ಉತ್ತರವನ್ನು ಕೇಳಿ ಭೀಮರಾಯನು:—ನಮ್ಮಂಥ ನುರಿತ ಪೋಲೀಸ ಅಮಲ್ದಾರರಿಗೆ ಒಮ್ಮೆಲೆ ತಿಳಿಯದ ಹಂಚಿಕೆಗಳು ನಿಮ್ಮಂಥ ಅಬಲೆಯರಿಗೆ ತಿಳಿಯುವ ದೊಂದು ಆಶ್ಚರ್ಯಕರವೇ ಸರಿ! ಎಂದಂದು, ಕೂಡಲೆ ಅವನು ತನ್ನ ನಾಲ್ವರು ಬಿಳೀ ಡ್ರೆಸ್ಸಿನ ಶಿಪಾಯಿಗಳನ್ನು ಸಂಗಡ ಕರಕೊಂಡು, ಒಂದು ಟ್ಯಾಕ್ಸಿಯಲ್ಲಿ ಆ ಇಬ್ಬರು ಹೆಂಗಸರೊಡನೆ ಹತ್ತಿದನು. ಟ್ಯಾಕ್ಸಿಯು ಸುಕುಮಾರಿಯು ತೋರಿಸಿದ ದಾರೀ ಹಿಡಿದು ಸಾಗಿತು. ೮-೧೦ ನಿಮಿಷಗಳಲ್ಲೇ ಅದು ನಿರ್ದಿಷ್ಟ ಸ್ಥಳಕ್ಕೆ ತಲುಪಲು, ಎಲ್ಲರೂ ಮೋಟಾರಿನಿಂದ ಇಳಿದರು. ಭೀಮರಾಯನು ಆ ನಾಲ್ವರಲ್ಲಿ ಇಬ್ಬರನ್ನು ಆ ಮನೆಯ ಬಾಗಿಲಲ್ಲಿ ನಿಲ್ಲಿಸಿ, ಉಳಿದವರೊಡನೆ ಅಟ್ಟವನ್ನೇರಿ ಮೇಲೆ ಹೋದನು ಭೀಮರಾಯನು ತನ್ನ ಪಿಸ್ತೂಲನ್ನು ಸಜ್ಜುಗೊಳಿಸಿಟ್ಟುಕೊಂಡೇ ನಡೆದಿದ್ದನು. ಸುಕುಮಾರಿಯು ಆ ಕೋಣೆಯ ಬೀಗ ತೆಗೆದು ಬಾಗಿಲ ತೆರೆದಳು. ಅಲ್ಲಿ ಆರ್ವೋಗಮ್‌ನು ನಿರಾಶೆಯಿಂದ ಭೂಮಿಯ ಮೇಲೆ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದನು. ಶಿತಿಕಂಠನೇ ಬಂದನೆಂದೂ, ಇಲ್ಲಿದ್ದ ಸುಶೀಲೆಯನ್ನು ಈ ಮೊದಲೇ ಆ ಹೊಯ್ಮಾಲೆ ಸುಕುಮಾರಿಯು ಓಡಿಸಿಕೊಂಡು ಹೋಗಿರುವದರಿಂದ ಇನ್ನು ಇವನು ನನ್ನ ಪ್ರಾಣ ತಕ್ಕೊಳ್ಳುವನೆಂದೂ ಆಗ ಆರ್ವೋಗಮ್‌ನಿಗೆ ಭಾಸವಾಯಿತು.

ಬಾಗಿಲ ತೆರೆದವಳೇ ಸುಕುಮಾರಿಯು ಆರ್ವೋಗಮ್‌ನ ಕಡೆಗೆ ಬೊಟ್ಟುಮಾಡಿ ಭೀಮರಾಯನನ್ನುದ್ದೇಶಿಸಿ:—ರಾಯರೇ, ಈತನೇ ಆ ನೀಚನು, ಎಂದು ತೋರಿಸಿದಳು. ಕೂಡಲೆ ಭೀಮರಾಯನು ಆರ್ವೋಗಮ್‌ನ ಕೆನ್ನೆಯ ಮೇಲೆ ಏಟು ಕೊಟ್ಟು:—ಎಲೇ ನೀಚಾ, ನಿನ್ನ ಧಣಿಯಾದ ಶಿತಿಕಂಠನೆಲ್ಲಿ? ಎಂದು ಗದ್ದರಿಸಿ ಕೇಳಿದನು.

ಈ ಜೊಯ್ಮಾಲೆಯೇ ಸರ್ವನಾಶಕ್ಕೆ ಕಾರಣಳೆಂದು ಆವೋರ್ಗವ್‌ನು ಸುಕುಮಾರಿಯ ಕಡೆಗೆ ಕೆಂಪಡರಿದ ಕಣ್ಣಿನಿಂದ ನೋಡುತ್ತ ಹಲ್ಲುಕಡಿಯ ಹತ್ತಿದನು. ತನ್ನ ಪ್ರಶ್ನೆಗೆ ಉತ್ತರ ಕೊಡದ್ದನ್ನು ಕಂಡು ಭೀಮರಾಯನು ತನ್ನ ಶಿಪಾಯಿಗೆ ಸನ್ನೆ ಮಾಡಲು, ಅವನು ಆವೋರ್ಗವ್‌ನನ್ನು ತನ್ನ ಕೈಬೆತ್ತದಿಂದ ಚೆನ್ನಾಗಿ ತಳಿಸಿ:—ನಿನ್ನ ಯಜಮಾನನಾದ ಶಿತಿಕಂಠನೆಲ್ಲಿ? ಬೇಗನೆ ಹೇಳು, ಎಂದು ಅಂದನು; ಆದರೂ ಆ ನೀಚನು ಗುಟ್ಟುಕೊಡದಾದನು. ಕಡೆಗೆ ಭೀಮರಾಯನು ತನ್ನ ಪಿಸ್ತೂಲಿನ ಕೊಳವೆಯನ್ನು ಅವನ ಎದೆಗೆ ಹಚ್ಚಿ ಕೇಳಲು, "ನನ್ನನ್ನು ಕೊಲ್ಲಬೇಡಿರಿ. ಅವನಿರುವ ಮನೆಯನ್ನು ತೋರಿಸುತ್ತೇನೆ; ನಡೆಯಿ"ರೆಂದನು.

ಕೂಡಲೆ ಎಲ್ಲರೂ ಆ ಮುಹಡಿಯ ಮನೆಯಿಂದ ಹೊರಬಿದ್ದು ದಾರಿಗೆ ಬಂದು ಟ್ಯಾಕ್ಸಿಯನ್ನು ಹತ್ತಿದರು. ಆ ಮೋಟಾರು ಹಲವು ಕಡೆಗೆ ಸುತ್ತವರಿದು ಕಡೆಗೆ ಶ್ರೀರಂಗಪಟ್ಟಣದ ಅಗಸೆಯೊಳಗಿನ ಒಂದು ಮುರುಕ ಬಿಡಾರಕ್ಕೆ ಬಂದಿತು. ಶಿತಿಕಂಠನು ಇದೇ ಮನೆಯಲ್ಲಿರುವನೆಂದು ಆವೋರ್ಗವ್‌ನು ಭೀಮರಾಯನಿಗೆ ಹೇಳಲು, ಅವರೆಲ್ಲರೂ ಮೋಟಾರಿನಿಂದಿಳಿದು ಆವೋರ್ಗವ್‌ನೊಡನೆ ಆ ಮನೆಯನ್ನು ಪ್ರವೇಶಿಸಿದರು. ಆಗ ಮೂರೂಸಂಜೆಯ ಹೊತ್ತಾದ್ದರಿಂದ ಎಲ್ಲೆಲ್ಲಿಯೂ ಕತ್ತಲುಗವಿದಿತ್ತು. ಇವರು ಒಳಗೆ ಕಾಲಿಡುವಷ್ಟರಲ್ಲಿ ಶಿತಿಕಂಠ-ಶ್ರೀಕಂಠರ ನಡುವೆ ಬಹು ದೊಡ್ಡ ವಾಗ್ಯುದ್ಧವಾಗಿತ್ತು. ಕಡೆಗೆ ಶಿತಿಕಂಠನು:—ಶ್ರೀಕಂಠಾ, ನೀನಂತೂ ಈ ಗುಹೆಯೊಳಗಿಂದ ಪ್ರಾಣಸಹಿತ ಹೊರಬೀಳುವದೇ ಇಲ್ಲ; ಆದರೂ ನಿನ್ನ ಕಣ್ಣೆದುರಿಗೆ ನಿನ್ನ ಆ ಪ್ರಿಯ ಸುಶೀಲೆಯನ್ನು ಭ್ರಷ್ಟಗೊಳಿಸಿ ನನ್ನ ಸಂಕಲ್ಪವನ್ನು ಈಡೇರಿಸಿಕೊಳ್ಳುತ್ತೇನೆ. ನನ್ನ ವಿಶ್ವಾಸಿಕ ಆವೋರ್ಗವ್‌ನು ಇಷ್ಟರಲ್ಲಿ ಅವಳನ್ನು ಇಲ್ಲಿಗೆ ಕರೆತರಬಹುದು, ಎಂದು ನುಡಿಯಲಿಕ್ಕೂ, ಆವೋರ್ಗವ್‌ನೂ, ಸುಶೀಲೆ ಮೊದಲಾದವರೂ ಅಲ್ಲಿಗೆ ಬರಲಿಕ್ಕೂ ಗಂಟೆ ಬಿದ್ದಿತು. ಆ ಕೂಡಲೆ ಶಿತಿಕಂಠನು ತನ್ನ ನಾಲಿಗೆಯನ್ನು ಮತ್ತಷ್ಟು ಉದ್ದ ಮಾಡಿ:—ಇಗೋ ನೋಡು, ಈ ನನ್ನ ಸೂಳೆ ಸುಶೀಲೆಯು ಬಂದಳು, ಎಂದು ಹಿಂದಿರುಗುವಷ್ಟರಲ್ಲಿ ಸುಕುಮಾರಿಯ ನೇತ್ರಸಂಕೇತದಂತೆ ಸುಶೀಲೆಯು ಅವನನ್ನೊಮ್ಮೆ ಎಡಗಾಲಿನಿಂದ ಒದ್ದು ಕೆಡಹಿದಳು.

ಸುಶೀಲೆಯನ್ನು ಕಂಡೊಡನೆ ಶ್ರೀಕಂಠನಿಗೆ ಪರಮ ಸಂತೋಷವಾಯಿತು. ಆ ಆನಂದದ ಭರದಲ್ಲಿ ಅವನು:—ಸುಶೀಲಾಬಾಯೀ, ಈವರೆಗೆ ನೀನೆಲ್ಲಿದ್ದೆ? ಎಂದು ಪ್ರಶ್ನೆ ಮಾಡಲು,

"ಈ ಘಾತುಕರ ಬಲೆಯಲ್ಲಿ ಸಿಕ್ಕಿದ್ದನು" ಎಂದು ಅವಳು ಉತ್ತರವನ್ನು ಕೊಟ್ಟಳು.

ಆಗ ಭೀಮರಾಯ ಇನಸ್ಪೆಕ್ಟರನು ಮುಂದೆ ಬಂದು:—ಯಾಕೆ ನಾಮಧಾರಿ ಶ್ರೀಕಂಠ-ಶಿತಿಕಂಠರಾಯರೇ, ಇದೇನು ನಡಿಸಿರುವಿರಿ? ಎಂದು ಕೇಳಲು,

"ಸಾಹೇಬರೇ, ಆ ನೀಚನೇನು ಹೇಳಬೇಕು? ಮುದ್ದೇ ಮಾಲಿನೊಡನೆ ಆರೋಪಿಯು ಹಸ್ತಗತವಾಗಿರುತ್ತಾನೆ" ಎಂದು ಸುಕುಮಾರಿಯು ಭೀಮರಾಯನಿಗೆ ಹೇಳಿದಳು.

ಇನ್ನು ಗೊಂದಲ ಮಾಡುವದರಿಂದಲೂ, ಅಪರಾಧದ ನಿರಸನ ಮಾಡುವದರಿಂದಲೂ ಪ್ರಯೋಜನವಿಲ್ಲೆಂದು ಬಗೆದು, ಶಿತಿಕಂಠನು ಸುಕುಮಾರಿಯ ಕಡೆಗೆ ಟಕಮಕ ನೋಡುತ್ತ ನಿಂತುಕೊಂಡನು. ಭೀಮರಾಯನ ಸಂಜ್ಞೆಯ ಮೇರೆಗೆ ಆತನ ಶಿಪಾಯಿಗಳು ಶಿತಿಕಂಠ ಹಾಗು ಆವೆರ್ಗಗವ್‌ ಇವರ ಕೈಕಾಲುಗಳಿಗೆ ಬೇಡಿ ತೊಡಿಸಿದರು. ಕೈ ಬೇಡಿಗೂ, ಕಾಲು ಬೇಡಿಗೂ ಸರಪಳಿಯಿಂದ ಬಿಗಿದರು. ಶಿತಿಕಂಠನ ಕೈ-ಕಾಲುಗಳು ಶೃಂಖಲಾಬದ್ಧವಾದ ಬಳಿಕ ಸುಕುಮಾರಿಯು ಅವನನ್ನುದ್ದೇಶಿಸಿ:—ಏನು ಜಹಗೀರದಾರರೇ, ಇದು ಯಾತರ ಪ್ರಾಯಶ್ಚಿತ್ತವೆಂಬದು ಗೊತ್ತಾಯಿತೇ? ತನ್ನ ಕರ್ಮವು ತನಗೆ ಬಿಡದು, ಎಂಬ ದಾಸರ ವಾಕ್ಯವನ್ನು ನೆನಪುಮಾಡಿಕೊಳ್ಳಿರಿ, ಎಂದು ಹಂಗಿಸಿದಳು. ಬಳಿಕ ಅವರೆಲ್ಲರೂ ಟ್ಯಾಕ್ಸಿಯನ್ನೇರಿ ಪೋಲೀಸ ಸ್ಟೇಶನ್ನಿಗೆ ಬಂದರು.

‡ ‡ ‡ ‡

ಶಿತಿಕಂಠನ ಕೇಸು ವಾರಗಟ್ಟಲೆ ನಡೆಯಿತು. ಎಂಕ್ಯಾಮಾವನ ಕೊಲೆ ಮಾಡಿದ ಆರೋಪ ಮೊದಲುಮಾಡಿಕೊಂಡು ಎಲ್ಲ ಆರೋಪಗಳೂ ಶಿತಿಕಂಠನ ಮೇಲೆ ಶಾಬೀತಾದವು. ಅವನೂ ಒಪ್ಪಿಕೊಂಡನು. ಕೂಡಲೆ ಸೆಶನ್‌ ಜಜ್ಜನು ಅವನಿಗೆ ಗಲ್ಲಿನ ಶಿಕ್ಷೆಯನ್ನೂ, ಅವನ ಸಹಾಯಕನೆಂದು ಆವೆರ್ಗಗವ್‌ನಿಗೆ ಆಜನ್ಮ ಕರಿನೀರಿನ ಶಿಕ್ಷೆಯನ್ನೂ ವಿಧಿಸಿದನು.

* * * * *

ಶ್ರೀಕಂಠನೇ ಎಂಕ್ಯಾಮಾವನ ಖರೇ ವಾರಸದಾರನೆಂದು ಸಿದ್ಧವಾದುದರಿಂದ, ಅವನಿಗೆ ಎಲ್ಲ ಆಸ್ತಿಯೂ ಲಭಿಸಿತು. ಕೆಲವು ದಿನಗಳಲ್ಲೇ ಶ್ರೀಕಂಠ-

ಸುಶೀಲೆಯರ ಪಾಣಿಗ್ರಹಣ ಮಹೋತ್ಸವವು ಬಹು ವಿಜೃಂಭಣೆಯಿಂ ಜರುಗಿತು.

†‡† †‡† †‡† †‡†

ಮುಂದೆ ಕೆಲ ದಿನಗಳಲ್ಲಿಯೇ ಊರ ಹೊರಗಿನ ದೊಡ್ಡ ಕೆರೆಯಲ್ಲಿ ಒಂದು ಹೆಣವು ಸಿಕ್ಕಿತು. ಅದು ಸುಕುಮಾರಿಯದಾಗಿದ್ದು, "ನನ್ನ ಜೀವಿತವು ನನಗೆ ಬೇಡಾದುದರಿಂದ, ನಾನು ಸತ್ತಿರುವೆನೆಂಬ ಚೀಟಿಯು ಆ ಹೆಣದ ಸೀರೆಯ ಸೆರಗಿನಲ್ಲಿ ಸಿಕ್ಕಿತು.




ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ, ಇವರಿಂದ

ಛಾಪಿಸಲ್ಪಟ್ಟಿತು.